ಉಪನ್ಯಾಸ ಗ್ರಂಥಮಾಲೆ
೩೧೯

# ದಾಸ ಸಾಹಿತ್ಯ ಹಾಗು ಸಾಮಾಜಿಕ ಮೌಲ್ಯಗಳು

ಪ್ರೊ. ಇಲ್ಲೂರು ಜಯರಾಮಪ್ಪ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
ಜನವರಿ, ೧೯೮೧

ಉಪನ್ಯಾಸ ಗ್ರಂಥಮಾಲೆ

೩೧೯

# ದಾಸ ಸಾಹಿತ್ಯ
# ಹಾಗು
# ಸಾಮಾಜಿಕ ಮೌಲ್ಯಗಳು

ಪ್ರೊ. ಇಲ್ಲೂರು ಜಯರಾಮಪ್ಪ ಎಂ.ಎ;ಬಿ.ಎಡ್.



ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಜನವರಿ, ೧೯೮೧

ಪ್ರಕಾಶಕರು :

**ಸಿ. ಎಸ್. ಕಣವಿ**

ನಿರ್ದೇಶಕರು, ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦ ೦೦೩

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ಜನವರಿ, ೧೯೮೧



ಬೆಲೆ : ೫೦ ಪೈಸೆ

ಮುದ್ರಕರು :

**ಜಿ. ಬಿ. ಮನ್ವಾಚಾರ**

ಸಹಾಯಕ ನಿರ್ದೇಶಕರು

ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ

ಧಾರವಾಡ–೫೮೦ ೦೦೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯುವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸಗ್ರಂಥಮಾಲೆ' ಅತ್ಯಂತ ಮುಖ್ಯವೂ ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ, ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೧೮ ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು–ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

| | |
|---|---|
| ಕರ್ನಾಟಕ ವಿಶ್ವವಿದ್ಯಾಲಯ | **ಎಸ್. ಎಸ್. ಒಡೆಯರ** |
| ಧಾರವಾಡ | ಕುಲಪತಿಗಳು |

# ಅರಿಕೆ

ದಾಸ ಸಾಹಿತ್ಯವನ್ನು ಅವಲೋಕಿಸಿದಾಗ್ಗೆ ದಾಸರ ಪ್ರತಿಯೊಂದು ಹಾಡಿನಲ್ಲೂ ಜನರನ್ನು ಉದ್ಧಾರ ಮಾಡುವ ಕಳಕಳಿ ಕಾಣಸಿಗುತ್ತದೆ. ಆದುದರಿಂದ ಆ ಸಾಹಿತ್ಯದ ಸಾಮಾಜಿಕ ಮೌಲ್ಯವನ್ನು ಕುರಿತು ವಿವರವಾಗಿ ಬರೆಯಬೇಕಾದರೆ ದಾಸರ ಸುಮಾರು ಎಲ್ಲ ಹಾಡುಗಳನ್ನು ಉಲ್ಲೇಖಿಸಬೇಕಾಗುತ್ತದೆ ಎಂದು ಎನಿಸುತ್ತದೆ. ಆದರೆ ಈ ಕಿರುಹೊತ್ತಿಗೆಯಲ್ಲಿ ಅವೆಲ್ಲವುಗಳ ಉಲ್ಲೇಖನ ಸಾಧ್ಯವಾಗದ ಮಾತು. ಆದುದರಿಂದ ನನಗೆ ಅನಿವಾರ್ಯವೆಂದು ಕಂಡು ಬಂದ ಕೆಲವೇ ಕೆಲವು ಹಾಡುಗಳನ್ನು ಉಲ್ಲೇಖಿಸಿ ಈ ಲೇಖನವನ್ನು ಬರೆದಿದ್ದೇನೆ. ಈ ಲೇಖನವು ಓದುಗರಲ್ಲಿ ದಾಸ ಸಾಹಿತ್ಯವನ್ನು ಇನ್ನೂ ಆಳವಾಗಿ ಅಭ್ಯಾಸ ಮಾಡುವ ಬಯಕೆ ಹುಟ್ಟಿಸಿದಲ್ಲಿ ನನ್ನ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ. ಈ ಸಾಹಿತ್ಯದ ಸಾಮಾಜಿಕ ಮೌಲ್ಯವನ್ನು ಅಳೆಯುವವರು ದಾಸರ ಹೃದಯ ಹಾಗೂ ದೃಷ್ಟಿಯನ್ನು ಹೊಂದಿ ಆ ಕೆಲಸಕ್ಕೆ ತೊಡಗಬೇಕೆಂದು ನನ್ನ ಸವಿನಯ ವಿಜ್ಞಾಪನೆ.

ಕುಷ್ಟಗಿಯಲ್ಲಿ ನನ್ನ ಉಪನ್ಯಾಸವನ್ನು ಏರ್ಪಡಿಸಿ, ಈ ಕಿರುಹೊತ್ತಿಗೆಯನ್ನು ನನ್ನಿಂದ ಬರೆಯಿಸಿ ಪ್ರಕಟಿಸಿದ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ನಾನು ಋಣಿಯಾಗಿದ್ದೇನೆ. ಆ ವಿಭಾಗದ ನಿರ್ದೇಶಕರಾದ ಶ್ರೀ ಚೆನ್ನವೀರ ಕಣವಿ, ಉಪ ನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕ ಹಾಗೂ ಸಹಾಯಕ ನಿರ್ದೇಶಕರಾದ ಶ್ರೀ ಎಲ್. ಎಂ. ಗುಡ್ಡೀನ ಇವರಿಗೆ ನಾನು ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಈ ಶಿಬಿರವನ್ನು ವ್ಯವಸ್ಥೆಗೊಳಿಸಿ ನನ್ನ ಉಪನ್ಯಾಸಕ್ಕೆ ತಕ್ಕ ಏರ್ಪಾಟು ಮಾಡಿದ್ದ ಕುಷ್ಟಗಿಯ ಕರ್ನಾಟಕ ಸಂಘದ ಎಲ್ಲ ಪದಾಧಿಕಾರಿಗಳಿಗೆ ನಾನು ಆಭಾರಿಯಾಗಿದ್ದೇನೆ.

ರಾಯಚೂರು

ಇಲ್ಲೂರು ಜಯರಾಮಪ್ಪ

# ಪರಿವಿಡಿ

# ೧. ದಾಸ ಸಾಹಿತ್ಯ

ಶ್ರೀಮಧ್ವಾಚಾರ್ಯರು ಬೋಧಿಸಿದ ದ್ವೈತ ಮತದ ಅನುಯಾಯಿಗಳಾದ ಹರಿದಾಸರು ವೈರಾಗಿಗಳಾದರೂ ಸಮಾಜದಿಂದ ದೂರ ಉಳಿಯದೆ, ಅದರ ಸಂಪರ್ಕವನ್ನು ಕಡಿದುಕೊಳ್ಳದೆ. ಅದರಲ್ಲಿ ನಿರ್ಲಿಪ್ತರಾಗಿ ಇದ್ದುಕೊಂಡು ಜನ ಸಾಮಾನ್ಯರ ಸಮಸ್ಯೆಗಳನ್ನು ವಸ್ತುನಿಷ್ಠೆಯಿಂದ ನೋಡಿ, ಅವರ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು ಅವುಗಳ ಪರಿಹಾರೋಪಾಯಗಳನ್ನು ಕಂಡು ಹಿಡಿಯಲು ಹವಣಿಸಿದರು; ಅವರಲ್ಲಿ ಕಂಡು ಬರುವ ಭೌತಿಕತೆ, ಧರ್ಮಹೀನತೆ. ಲೋಪದೋಷ ಮುಂತಾದವುಗಳ ನಿವಾರಣೆಗಾಗಿ ಯತ್ನಿಸಿದರು; ದಾರಿ ತಪ್ಪಿದವರಿಗೆ ಸರಿಯಾದ ಮಾರ್ಗ ತೋರಿಸಿಕೊಟ್ಟರು; ತಮ್ಮಂತೆ ಇಡೀ ಸಮಾಜವು ಭಕ್ತಿಮಾರ್ಗದಲ್ಲಿ ಸಾಗಿ ಮುಕ್ತಿ ಪಡೆಯಲು ಅರ್ಹವಾಗಲಿ ಎಂದು ಶ್ರಮಿಸಿದರು; ಭಕ್ತಿಪರವಶರಾಗಿ ತಮ್ಮ ತಮ್ಮ ಇಷ್ಟದೈವವನ್ನು ಕುರಿತು ಹಾಡಿ ನಲಿದಾಡಿದರು; ದೇವರ ದರ್ಶನ ಕಷ್ಟಸಾಧ್ಯವೆನಿಸಿದಾಗ್ಗೆ ಚಡಪಡಿಸಿದರು; ದರ್ಶನವಾದಾಗ್ಗೆ ಮೈಮರೆತು ಕುಣಿದಾಡಿದರು. ಅವರ ಈ ಹವಣಿಕೆ, ಈ ಯತ್ನ, ಈ ಮಾರ್ಗದರ್ಶನ, ಈ ನಲಿನಲಿದಾಟ ಹಾಗು ಈ ಕುಣಿದಾಟ ಹಾಡಿನ ರೂಪದಲ್ಲಿ ಹೊರ ಹೊಮ್ಮಿದವು. ಈ ಹಾಡುಗಳ ರಾಶಿಯೇ ದಾಸ ಸಾಹಿತ್ಯ. ಇಂತಹ ಅಮೂಲ್ಯ ಸಾಹಿತ್ಯವನ್ನು ನೀಡಿ ಅವರು ಸಮಾಜದ

ಋಣವನ್ನು ತೀರಿಸಿದರು. ಸಮಾಜದಿಂದ ಪಡೆದುದಕ್ಕಿಂತಲೂ ಹೆಚ್ಚು ಬೆಲೆ ಬಾಳುವ ಈ ಸಾಹಿತ್ಯವನ್ನು ಕೊಟ್ಟು ಸಮಾಜವನ್ನೇ ಋಣಿಯನ್ನಾಗಿ ಮಾಡಿದರು.

## ೨. ದಾಸ ಸಾಹಿತ್ಯ ಹಾಗೂ ವಚನ ಸಾಹಿತ್ಯ

ದಾಸ ಸಾಹಿತ್ಯವನ್ನು ಪರೀಕ್ಷಿಸಿ ನೋಡಿದಾಗ್ಗೆ ಅದು ವಚನ ಸಾಹಿತ್ಯವನ್ನು ಹೆಚ್ಚಾಗಿ ಹೋಲುತ್ತಿರುವ ಸಂಗತಿ ಯಾರಿಗಾದರೂ ಕಾಣಸಬಹುದಾಗಿದೆ. ಈ ಎರಡೂ ಸಾಹಿತ್ಯಗಳಲ್ಲಿ ಭಕ್ತಿ ಪ್ರಧಾನ ಸ್ಥಾನವನ್ನಲಂಕರಿಸಿದ್ದುದು ಅತ್ಯಂತ ಮಹತ್ವದ ಹೋಲಿಕೆಯಾಗಿದೆ. ಈ ಎರಡರ ಕರ್ತೃಗಳು ವೈರಾಗಿಗಳಾಗಿದ್ದು ಸಮಾಜದೊಡನೆ ನಿಕಟ ಸಂಪರ್ಕ ಹೊಂದಿದ್ದರಲ್ಲದೆ ಅದರ ಒಳಿತಿಗಾಗಿ ಪ್ರಯತ್ನಿಸಿದ್ದುದು ಇನ್ನೊಂದು ಮಹತ್ವದ ಹೋಲಿಕೆಯಾಗಿದೆ. ಇವರಾರೂ ಸಮಾಜ ಹಾಗು ಸಂಸಾರವನ್ನು ತ್ಯಾಜ್ಯವೆಂದು ಭಾವಿಸಲಿಲ್ಲ. ಇವೆರಡರಲ್ಲಿ ಬಳಕೆಯಾದ ಭಾಷೆ ಜನರಾಡುವ ಭಾಷೆಗೆ ತೀರ ಹತ್ತಿರದ್ದಾಗಿದೆ. ಈ ಎರಡೂ ಸಾಹಿತ್ಯಗಳ ಉದ್ದೇಶ ಭಕ್ತಿಯ ಮೂಲಕ ಮುಕ್ತಿಯ ಪ್ರಾಪ್ತಿಯಾಗಿದೆ. ಇವೆರಡರಲ್ಲೂ ಕರ್ತೃಗಳ ಅಂಕಿತಗಳು ಕಾಣಸಿಗುತ್ತವೆ. ವಚನ ಸಾಹಿತ್ಯ ಹರಪಾರಮ್ಯವನ್ನು ಬೋಧಿಸಿದರೆ ಈ ಸಾಹಿತ್ಯ ಹರಿಪಾರಮ್ಯವನ್ನು ಬೋಧಿಸಿತು. ವಸ್ತು. ವಿಷಯ. ಭಾಷೆ. ಅಂಕಿತ. ಇಷ್ಟದೈವ ಪಾರಮ್ಯ ಮುಂತಾದವುಗಳನ್ನು ನೋಡಿದಾಗ್ಗೆ ದಾಸ ಸಾಹಿತ್ಯದ ಮೇಲೆ ವಚನ ಸಾಹಿತ್ಯದ ಪ್ರಭಾವ ಬಿದ್ದುದು ಸ್ಪಷ್ಟವಾಗಿ ಕಂಡುಬರುತ್ತವೆ.

## ೩. ದಾಸ ಸಾಹಿತ್ಯದ ಲಕ್ಷಣ

ವಚನ ಸಾಹಿತ್ಯಕ್ಕೆ ಅದರ ಸ್ವರೂಪವನ್ನನುಲಕ್ಷಿಸಿ ಆ ಹೆಸರನ್ನು ಕೊಟ್ಟಕಾರಣ ಅದನ್ನು ಸುಲಭವಾಗಿ ಗುರುತಿಸಬಹುದಾಗಿದೆ. ಆದರೆ ದಾಸಸಾಹಿತ್ಯಕ್ಕೆ ಕರ್ತೃವನ್ನು ಗಮನದಲ್ಲಿಟ್ಟುಕೊಂಡು ಆ ಹೆಸರನ್ನು ಕೊಟ್ಟಕಾರಣ ಆ ಸಾಹಿತ್ಯವನ್ನು ಗುರುತಿಸುವಲ್ಲಿ ಕೊಂಚ ತೊಂದರೆಯಾಗಬಹುದು. ಈ ಎರಡೂ ಸಾಹಿತ್ಯಗಳು ಪರಸ್ಪರ ಹೋಲುತ್ತಿರುವುದನ್ನು ಈಗಾಗಲೆ ನೋಡಿದ್ದೇವೆ. ಈ ಹೋಲಿಕೆಯ ಪರಿಧಿಯೊಳಗೆ ಬಾರದ ಆದರೆ ದಾಸರಿಂದ ನಿರ್ಮಿತವಾದ ಸಾಹಿತ್ಯವನ್ನು ದಾಸಸಾಹಿತ್ಯವೆಂದು ಕರೆಯಬಹುದೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ವಾದಿರಾಜರು ರಚಿಸಿದ ವೈಕುಂಠ ವರ್ಣನೆ. ಸ್ವಪ್ನಗದ್ಯ. ಲಕ್ಷ್ಮೀಶೋಭಾನೆ ಇವುಗಳಾಗಲಿ ಕನಕದಾಸರು ರಚಿಸಿದ ಮೋಹನ ತರಂಗಿಣಿ. ರಾಮಧಾನ್ಯಚರಿತೆ. ಹರಿಭಕ್ತಿಸಾರ ಮುಂತಾದ ಗ್ರಂಥಗಳಾಗಲಿ: ಜಗನ್ನಾಥದಾಸರ ಕೃತಿಯಾದ ಹರಿಕಥಾಮೃತ ಸಾರವಾಗಲಿ: ಅಥವಾ ಹೆಳವನಕಟ್ಟೆ ಗಿರಿಯಮ್ಮನ ಚಂದ್ರಹಾಸಕಥೆ. ಸೀತಾಕಲ್ಯಾಣ, ಬ್ರಹ್ಮಕೊರವಂಜಿ ಮುಂತಾದ ಕೃತಿಗಳಾಗಲಿ ಅಥವಾ ಇತರ ದಾಸರಿಂದ ರಚನೆಗೊಂಡ ಈ ಬಗೆಯ ಕೃತಿಗಳಾಗಲಿ ದಾಸಸಾಹಿತ್ಯ ಎನಿಸಿಕೊಳ್ಳಲಾರವು. ಇವುಗಳನ್ನು ದಾಸರ ಶಿಷ್ಟ ಸಾಹಿತ್ಯವೆಂದು ಕರೆಯಬಹುದು. ದಾಸಸಾಹಿತ್ಯವೆಂದ ಕೂಡಲೆ ವಚನ ಸಾಹಿತ್ಯವನ್ನು ಹೋಲುವಂಥ ಸಾಹಿತ್ಯ ನಮ್ಮ ಕಣ್ಣು ಮುಂದೆ ಬಂದು ನಿಲ್ಲುತ್ತದೆ.

ಈ ಸಾಹಿತ್ಯದಲ್ಲಿ ಬರುವ ಹಾಡುಗಳು ಭಾವಗೀತೆಗಳಂತೆ ಸ್ವತಂತ್ರವಾದವುಗಳು. ಅವು ನಿರ್ದಿಷ್ಟ ಕಾವ್ಯದ ಅಂಗಗಳಲ್ಲ. ಇವು ತಮ್ಮಲ್ಲೆ ಪೂರ್ಣತೆಯುಳ್ಳವುಗಳು. ಒಂದು ಹಾಡಿಗೂ ಇನ್ನೊಂದು ಹಾಡಿಗೂ ಏಕತೆಯ ದೃಷ್ಟಿಯಿಂದ ಪೂರ್ವಾಪರ ಸಂಬಂಧವಿಲ್ಲ, ಪ್ರತಿಯೊಂದು ಪೂರ್ಣ ಕೃತಿಯಾಗಿದ್ದು ಅದು ಯಾವುದರ ಬಿಡಿಭಾಗವಾಗಿಲ್ಲ. ಪ್ರತಿಯೊಂದು ಹಾಡಿಗೂ ತನ್ನದೇ ಆದ ಉದ್ದೇಶವಿದೆ. ಅದು ತನ್ನ ಉದ್ದೇಶಪೂರ್ತಿಗಾಗಿ ಬೇರೊಂದು ನಿರ್ದಿಷ್ಟಹಾಡನ್ನು ಅವಲಂಬಿಸಿಲ್ಲ. ಇದರ ರಚನೆ ಗಾಗಿ ಬಳಕೆಯಾದ ಭಾಷೆ ಜನರ ಆಡು ಭಾಷೆಯಾಗಿದೆ. ಈ ಹಾಡುಗಳು ಸಂಗೀತಕ್ಕೆ ಅಳವಟ್ಟಿವೆ. ಇವುಗಳನ್ನು ಕೀರ್ತನೆ. ಸುಳಾದಿ ಹಾಗು ಉಗಾಭೋಗಗಳೆಂಬ ಪದ್ಯ ಜಾತಿಗಳಲ್ಲಿ ರಚಿಸ ಲಾಗಿದೆ. ಇವುಗಳಲ್ಲಿ ಯಾವುದಾದರೂ ಒಂದೇ ಪದ್ಯ ಜಾತಿ ಬಳಕೆಯಾಗಿದ್ದರೆ ಈ ಸಾಹಿತ್ಯಕ್ಕೆ ಅದರ ಹೆಸರು ಬರಬಹುದಾಗಿ ದ್ದಿತು. ಆದರೆ ಹಾಗಾಗಲಿಲ್ಲ ಈ ಲಕ್ಷಣಗಳುಳ್ಳ ಸಾಹಿತ್ಯವನ್ನು ದಾಸಸಾಹಿತ್ಯವೆಂದು ತಿಳಿದು ಈ ಲೇಖನಕ್ಕೆ ಬೇಕಾದ ಸಾಮಗ್ರಿ ಯನ್ನು ತೆಗೆದುಕೊಂಡಿದ್ದೇನೆ. ಉಳಿದ ಸಾಹಿತ್ಯವನ್ನು, ದಾಸರ ಶಿಷ್ಟ ಸಾಹಿತ್ಯವೆಂದು ಬಗೆದು, ಕೈಬಿಟ್ಟಿದ್ದೇನೆ.

## ೪. ದಾಸ ಸಾಹಿತ್ಯದ ಉಗಮ

"ವೈದಿಕ ಸಂಪ್ರದಾಯದಲ್ಲಿ ಸಂಸ್ಕೃತ ಭಾಷೆಯನ್ನು ಬಿಟ್ಟು ಪ್ರಾಕೃತ ಭಾಷೆಗಳನ್ನು ಆಶ್ರಯಿಸಿ ತನ್ಮೂಲಕ ಸಾಧನೆ ಮಾಡಿ ಕೊಳ್ಳುವುದು ನಿಷಿದ್ಧವೆಂಬ ವಾದವೊಂದು ರೂಢವಾಗಿದೆ. ಕೆಲವು ಪುರಾಣ ವಚನಗಳಲ್ಲಿ ಇದೇ ಅಭಿಪ್ರಾಯ ವ್ಯಕ್ತವಾಗಿದೆ" (ಡಾ॥ ಹೆಚ್. ಕೆ. ವೇದವ್ಯಾಸಾಚಾರ್ಯರು). ನಾವು ಹೇಳ ಬಯಸುವ ವಿಷಯ ಜನಸಾಮಾನ್ಯರಿಗೆ ಅರ್ಥವಾಗಬೇಕೆಂಬ ಉದ್ದೇಶ ನಮ್ಮದಾಗಿದ್ದರೆ ನಾವು ಅವರಾಡುವ ಭಾಷೆಯಲ್ಲಿ ಅವರು ಸುಲಭವಾಗಿ ಅರ್ಥಮಾಡಿಕೊಳ್ಳಬಹುದಾದ ಶಬ್ದಗಳನ್ನು ಬಳಸಿ ನಮ್ಮ ವಿಚಾರಗಳನ್ನು ವ್ಯಕ್ತಪಡಿಸಬೇಕು. ಭಾಷೆಯ ಮಡಿವಂತಿಕೆಯಿಂದ ಈ ಉದ್ದೇಶ ಸಾಧಿಸದು. ಭಾಷೆಗಿಂತ ಭಾವ ಮುಖ್ಯವೆಂದು ತಿಳಿದ ಶ್ರೀ ಮಧ್ವಾಚಾರ್ಯರೇ ತುಳು ಭಾಷೆಯಲ್ಲಿ ಕೆಲವು ಕೀರ್ತನೆಗಳನ್ನು ರಚಿಸಿದರು. ಹೀಗೆ, ಪ್ರಾದೇಶಿಕ ಭಾಷೆಯಲ್ಲಿ ಕೀರ್ತನೆಗಳನ್ನು ರಚಿಸುವ ಹಾದಿಯನ್ನು ಮುಂಬರುವ ತನ್ನ ಅನುಯಾಯಿಗಳಿಗೆ ಅವರು ಹಾಕಿಕೊಟ್ಟರು. ಈ ಹಾದಿಯನ್ನು ತುಳಿದ ಅನೇಕ ಹರಿದಾಸರು ಕನ್ನಡ ಭಾಷೆ ಯಲ್ಲಿ ಹಾಡುಗಳನ್ನು ಹಾಗು ಕೃತಿಗಳನ್ನು ರಚಿಸಿದರು. ದಾಸರು ಭಾಷೆಯ ಮಡಿವಂತಿಕೆಯಿಂದ ತಮ್ಮ ಸಾಹಿತ್ಯವನ್ನು ಮುಕ್ತ ಗೊಳಿಸಲು ಇಟ್ಟ ಈ ಹೆಜ್ಜೆಯನ್ನು ದಿಟ್ಟ ಹಾಗು ಕ್ರಾಂತಿಕಾರಕ ಹೆಜ್ಜೆಯೆನ್ನಬಹುದು.

ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದ ಮೊದಲನೆಯ ಹರಿದಾಸರು ಶ್ರೀ ನರಹರಿತೀರ್ಥರು ಪ್ರಪ್ರಥಮ ಕನ್ನಡ ಕೀರ್ತನಕಾರರೆಂಬ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರು ಹಲವಾರು ಕೀರ್ತನೆಗಳನ್ನು ರಚಿಸಿರಬೇಕು, ಆದರೆ ಅವುಗಳ ಪೈಕಿ ೧. ಎಂತು ಮರುಳಾದೆ ನಾನೆಂತು ಮರುಳಾದೆ, ೨. ಹರಿಯೇ ಇದು ಸರಿಯೇ ? ಮತ್ತು ೩. ತಿಳಿಕೊ ನಿನ್ನೊಳಗೆ ನೀನೇ ಎಂಬ ಮೂರು ಹಾಡುಗಳು ಮಾತ್ರ ಸಿಕ್ಕಿವೆ. ಉಳಿದವು ಕಾಲನಗರ್ಭದಲ್ಲಿ ಅಡಗಿ ಹೋಗಿರುವುದು ದುಃಖದಾಯಕ ಸಂಗತಿಯಾಗಿದೆ.

ಅಚಲಾನಂದರ ಕಾಲನಿರ್ಣಯವಾಗುವವರೆಗೆ ನರಹರಿತೀರ್ಥರನ್ನೇ ಮೊದಲನೆಯ ಕನ್ನಡಕೀರ್ತನಕಾರರೆಂದು ಇಟ್ಟುಕೊಳ್ಳಬಹುದು. ಅಚಲಾನಂದರು ತಮ್ಮ ಒಂದು ಹಾಡಿನಲ್ಲಿ 'ಮಧ್ವ ಮತದವನೆನಿಸಿ' ಎಂದು ಹೇಳಿರುವುದರಿಂದ, ಅಲ್ಲದೆ ಅವರ ಪದದ ಪುಸ್ತಕದಲ್ಲಿ ಉಲ್ಲೇಖವಾಗಿರುವ ಕಾಶೀಟ ಸಂಖ್ಯಾ ಸಂಕೇತವು ಶಾ. ಶಕೆ ೧೨೮೧ ವಿಳಂಬ ಸಂವತ್ಸರವನ್ನು ಸೂಚಿಸುವುವುದರಿಂದ ಅವರು ನರಹರಿ ತೀರ್ಥರ ಸಮಕಾಲೀನರಾಗಿರಬೇಕೆಂದು ಹೇಳಿ 'ಅಂತೂ ನರಹರಿತೀರ್ಥರೇ ಹರಿದಾಸ ಕೂಟಕ್ಕೆ ಆದ್ಯ ಆಚಾರ್ಯರೆಂದು ಹೇಳಬಹುದು' ಎಂಬ ಅಭಿಪ್ರಾಯವನ್ನು ಡಾ॥ ಹೆಚ್. ಕೆ. ವೇದವ್ಯಾಸಾಚಾರ್ಯರು ವ್ಯಕ್ತಪಡಿಸಿದ್ದಾರೆ.

ನರಹರಿ ತೀರ್ಥರ ತರುವಾಯ ಒಂದು ಶತಮಾನದವರೆಗಿನ ಅವಧಿಯಲ್ಲಿ ದಾಸಸಾಹಿತ್ಯ ನಿರ್ಮಾಣಗೊಂಡಂತೆ ಕಂಡುಬರುವುದಿಲ್ಲ. ಈ ಸಾಹಿತ್ಯ ಹುಲುಸಾಗಿ ಬೆಳೆಯಲಾರಂಭಿಸಿದ್ದುದು

್ರೀಪಾದರಾಯರ ಕಾಲದಿಂದ. ಇವರ ಪರಂಪರೆಯಲ್ಲಿ ಬೆಳೆದ
ಈ ಸಾಹಿತ್ಯವನ್ನು ದಾಸಸಾಹಿತ್ಯದ ಪ್ರಥಮ ಘಟ್ಟದ ಸಾಹಿತ್ಯ
ನ್ನಬಹುದು. ವ್ಯಾಸರಾಯರು, ವಾದಿರಾಜರು, ಪುರಂದರ
ಾಸರು ವೈಕುಂಠದಾಸರು, ಕನಕದಾಸರು ಮುಂತಾದ ಹರಿ
ಾಸರು ಈ ಘಟ್ಟದ ಪ್ರಮುಖ ವ್ಯಕ್ತಿಗಳು. ಪ್ರಸನ್ನ ವೆಂಕಟ
ಾಸರು, ವಿಜಯದಾಸರು, ಹೆಳವನಕಟ್ಟೆ ಗಿರಿಯಮ್ಮ, ಗೋಪಾಲ
ಾಸರು, ಜಗನ್ನಾಥದಾಸರು, ಮುಂತಾದವರು ಈ ಸಾಹಿತ್ಯದ
ಎರಡನೆಯ ಘಟ್ಟದ ಹೆಸರಾಂತ ವ್ಯಕ್ತಿಗಳು.

## ೩. ದಾಸ ಸಾಹಿತ್ಯದ ರಚನೆಯ ಉದ್ದೇಶ

ದಾಸರು ಅಪ್ಪಟ ವೈರಾಗಿಗಳು. ಅವರ ದೃಷ್ಟಿಯಲ್ಲಿ.
್ಯಾತಿ, ಅಧಿಕಾರ ಮುಂತಾದವುಗಳು ಕ್ಷುಲ್ಲಕವಾದವುಗಳು. ಅವು
ಳ ಪ್ರಾಪ್ತಿಗಾಗಿ ಅವರು ಸಾಹಿತ್ಯ ರಚಿಸಲಿಲ್ಲ. ಅವರ ಜೀವನಕ್ಕೆ
ಂದು ಗುರಿಯಿದ್ದಿತು. ಆ ಗುರಿಯ ಪ್ರಾಪ್ತಿಗಾಗಿಯೇ ಅವರು
ಮ್ಮ ಜೀವನವನ್ನು ಮುಡುಪಾಗಿಟ್ಟರು. ಇದಕ್ಕಾಗಿ ಅವರು
ಕ್ತಿಮಾರ್ಗವನ್ನು ಅವಲಂಬಿಸಿದರು. ಇಂಥ ಗುರಿಪ್ರಾಪ್ತಿಗೂ
ಾಗು ಸಾಹಿತ್ಯ ರಚನೆಗೂ ಯಾವ ಸಂಬಂಧವಿದೆಯೆಂಬ
್ರಶ್ನೆ ಸಹಜವಾಗಿ ಉದ್ಭವಿಸುತ್ತದೆ. ವಾಸ್ತವವಾಗಿ ದಾಸರು
ಗುರಿಯ ಪ್ರಾಪ್ತಿಗಾಗಿ ಸಾಹಿತ್ಯವನ್ನು ರಚಿಸಲಿಲ್ಲ.
ದರೆ ತಾವು ಪಡೆಯುವುದನ್ನು ಇತರರೂ ಪಡೆಯಲಿ ಎಂಬ
ಬಿಚ್ಛೆ ಅವರದಾಗಿತ್ತು. ಇತರರು ಅದನ್ನು ಪಡೆದಾಗ್ಗೆ ಅವರಿಗೆ

ನಿಜವಾದ ತೃಪ್ತಿಯುಂಟಾಗುತ್ತಿತ್ತು. ಇಂಥವರನ್ನು ಮಹಾತ್ಮ ರೆಂದು ಕರೆಯದೆ ಇನ್ನಾರನ್ನು ಕರೆಯಬೇಕು ? ಗುರಿಪ್ರಾಪ್ತಿಯ ಹಂಬಲವನ್ನು ಇತರರಲ್ಲಿ ಹುಟ್ಟಿಸಲು ಅವರು ಯತ್ನಿಸಿದುದು ಸ್ವಾಭಾವಿಕವಾಗಿದೆ. ಲೋಪದೋಷಗಳ ಆವರಣವಿರುವ ವ್ಯಕ್ತಿ ಯಲ್ಲಿ ಇಂತಹ ಹಂಬಲ ಸುಲಭವಾಗಿ ಹುಟ್ಟದು. ಅದಕ್ಕಾಗಿ ಇವರು ಶಕ್ತಿಮೀರಿ ಯತ್ನಿಸಿದರು. ನಿರಪೇಕ್ಷೆಯ ಬುದ್ಧಿಯಿಂದ ಕರ್ತವ್ಯಬದ್ಧರಾಗಿ ಅವನ ಲೋಪದೋಷಗಳನ್ನು ದೂರಮಾಡಿ ಅವನನ್ನು ಮುಕ್ತಿಗೆ ಅರ್ಹನನ್ನಾಗಿ ಮಾಡಲು ಹೆಣಗಾಡಿದರು. ಅವರ ಈ ಪ್ರಯತ್ನದ ಸ್ವರೂಪವೇ ಈ ಹಾಡುಗಳು. ಇವು ಸಮಕಾಲೀನರನ್ನಷ್ಟೇ ಅಲ್ಲದೆ ಮುಂಬರುವ ಪೀಳಿಗೆಯನ್ನೂ ಉದ್ಧರಿಸುತ್ತ ಬಂದಿವೆ. "ಹರಿದಾಸರು ತಾವೊಬ್ಬರೇ ಹರಿ ದರ್ಶನದಿಂದ ಭಾವಸಮಾಧಿಯಲ್ಲಿ ಮೈಮರೆಯುವಂತಹ ಸ್ವಾರ್ಥಿ ಗಳಲ್ಲ. ತಾವು ತಿಳಿದು, ನಡೆದು, ಕಂಡುಕೊಂಡ ಸತ್ಯವನ್ನು ಅರ್ಹರಿಗೆ ಉಪದೇಶಿಸಿ ಅವರನ್ನೂ ತಮ್ಮಂತೆ ಆತ್ಮಾರಾಮ ರನ್ನಾಗಿ ಮಾಡಲು ತೊಡಗಿದ ಮಹಾಪುರುಷರು" (ಡಾ॥ ಹೆಚ್. ಕೆ. ವೇದವ್ಯಾಸಾಚಾರ್ಯರು).

## ೬. ದಾಸ ಸಾಹಿತ್ಯದಲ್ಲಿ ಬಳಕೆಯಾದ ಭಾಷೆ

ಹರಿದಾಸರು ಸಂಸ್ಕೃತ ಭಾಷೆಯಲ್ಲಿ ಅಗಾಧ ಪಾಂಡಿತ್ಯ ಹೊಂದಿದ್ದರೂ ಆ ಭಾಷೆಯ ಮಡಿವಂತಿಕೆಯ ಬಂಧನದಿಂದ ಮುಕ್ತರಾಗಿ, ಜನಸಾಮಾನ್ಯರು ತಮ್ಮ ಹಾಡುಗಳಿಂದ ಪ್ರಯೋ

ಜನೆ ಹೊಂದಲಿ ಎಂಬ ಸದುದ್ದೇಶದಿಂದ ಕನ್ನಡ ಭಾಷೆಯಲ್ಲಿಯೇ ಅವುಗಳನ್ನು ರಚಿಸಿದರು. ಅವರು ಬಳಸಿದ ಈ ಭಾಷೆಯು ಸಂಸ್ಕೃತ ಭೂಯಿಷ್ಠವಾಗಿರದೆ ಜನಸಾಮಾನ್ಯರು ಬಳಸುವ ಸಾಮಾನ್ಯ ಹಾಗು ಸರಳ ಪದಗಳನ್ನು ಹೊಂದದ ಕಾರಣ ಅವು ಜನರ ಪಾಲಿಗೆ ಸುಲಿದ ಬಾಳೆಯ ಹಣ್ಣಿನಂತಾದವು. ಆದುದರಿಂದ ಆ ಹಾಡುಗಳು ಜನರಿಗೆ ಪರಕೀಯವೆಂದು ತೋರದೆ ಅವರ ಪಾಲಿಗೆ ಸ್ವಕೀಯವೆನಿಸತೊಡಗಿದವು. ಶ್ರೇಷ್ಠ ವಿಚಾರಗಳಿಂದ ಶ್ರೀಮಂತವಾಗಿ ಪಂಡಿತರ ಮೆಚ್ಚುಗೆಗೆ ಮೊದಲೇ ಪಾತ್ರವಾಗಿದ್ದ ಆ ಹಾಡುಗಳು ಸರಳ ಭಾಷೆಯಿಂದಾಗಿ ಪಾಮರರಿಗೂ ಹಿಡಿಸಿದವು. ಆತ್ಮೀಯತೆ, ಕಳಕಳಿ ಹಾಗು ಪ್ರೇಮದಿಂದ ಹೇಳಿದ ಆ ಹಾಡುಗಳು ಪರಕೀಯರು ಹೇಳುವ ಮಾತುಗಳೆಂದೆನಿಸದೆ ತಮ್ಮ ಹಿತೈಷಿಗಳು ತಮಗೆ ಹೇಳುವ ಮಾತುಗಳು ಅಥವಾ ತಮಗೆ ತಾವೇ ತಿಳಿಹೇಳಿಕೊಳ್ಳುವ ಮಾತುಗಳೆಂದು ಜನರಿಗೆ ಎನಿಸತೊಡಗಿದವು. ಇದರಿಂದ ಅವುಗಳು ಜನರ ಮನಸ್ಸಿನ ಮೇಲೆ ಉಂಟುಮಾಡಿದ ಪರಿಣಾಮ ಗಾಢ ಹಾಗು ಶಾಶ್ವತವಾಗಲು ಸಾಧ್ಯವಾಯಿತು. ಹೀಗೆ ಆ ಹಾಡುಗಳು ಜನರನ್ನು ತಿದ್ದಲು ಸಮರ್ಥವಾದವು. ಇಲ್ಲಿ ಬಳಕೆಯಾದ ಭಾಷೆ ದಾಸ ಸಾಹಿತ್ಯದ ಹೊರಮೈಯಾದರೂ ಅದರ ಸಾಮಾಜಿಕ ವೈಶಾಲ್ಯವನ್ನು ಕಡೆಗಣಿಸುವಂತಿಲ್ಲ.

# ೭. ಸಂಗೀತ ಮತ್ತು ನೃತ್ಯ

ದೇವರು ಭಕ್ತಿಪ್ರಿಯವಾಗಿರುವಂತೆ ಸಂಗೀತ ಹಾಗು ನೃತ್ಯಪ್ರಿಯನೂ ಆಗಿದ್ದನೆಂದು ದಾಸರು ಭಾವಿಸಿದ್ದರು. ಮಾನವನು ಇದಕ್ಕೆ ಹೊರತಾಗಲಿಲ್ಲ. ಅವನೂ ನಾದಕ್ಕೆ ಮಾರು ಹೋಗಿ ಮಂತ್ರ ಮುಗ್ಧನಾಗುತ್ತಾನೆ; ಆದರ ಆನಂದದಲ್ಲಿ ತನ್ಮಯನಾಗಿ ಎಲ್ಲವನ್ನು ಮರೆಯುತ್ತಾನೆ. ಇಷ್ಟು ಶಕ್ತಿಯುತವಾದ ಈ ಅಸ್ತ್ರವನ್ನು ದಾಸರು ವ್ಯರ್ಥವಾಗಿ ಹೋಗಗೊಡಲಿಲ್ಲ. ಅದನ್ನು ಕೀರ್ತನೆಗಳಿಗೆ ಬಳಸಿ ಸಾರ್ಥಕಗೊಳಿಸಿದರು. ಹೀಗೆ ಸಾರ್ಥಕಗೊಂಡ ಸಂಗೀತದಿಂದ ಸಿಗುವ ಆನಂದವು ಆನಂದಕ್ಕಾಗಿ ಇರದೆ ದಿವ್ಯತೆಯ ಪ್ರಾಪ್ತಿಯ ಉದ್ದೇಶಕ್ಕಾಗಿದ್ದ ಕಾರಣ ಅದರ ಘನತೆ ಹೆಚ್ಚಿತು. ನಾದದಲ್ಲಿ ಮೈಮರೆತಾಗ್ಗೆ ಸುಲಭವಾಗಿ ಅರ್ಥವಾಗುವ ಈ ಹಾಡುಗಳು ಅವಿರೋಧವಾಗಿ ವ್ಯಕ್ತಿಯ ಮನಸ್ಸನ್ನು ಅವನ ಅರಿವಿಲ್ಲದೆ ಪ್ರವೇಶಿಸಿ ಅತ್ಯದ್ಭುತ ಪರಿಣಾಮವನ್ನುಂಟುಮಾಡುವುದನ್ನು ಯಾರೂ ಅಲ್ಲಗಳೆಯಲಾರರು. ಹೀಗೆ ಸಾಹಿತ್ಯದೊಡನೆ ಸಂಗೀತವನ್ನು ಬೆರಸಿ ಶ್ರೇಯಸ್ಸನ್ನೂ ಪ್ರೇಯಸ್ಸೂ ಆಗುವಂತೆ ದಾಸರು ಮಾಡಿದರು. ತಿಳಿವಳಿಕೆಯ ಜೊತೆಗೆ ಆನಂದವನ್ನು ನೀಡಿದ ದಾಸರು ಸಮಾಜದ ಬಗ್ಗೆ ಹೆಚ್ಚಿನ ಆಸಕ್ತಿ ಹೊಂದಿದ್ದರೆಂಬುದನ್ನು ತೋರಿಸಿಕೊಟ್ಟಿದ್ದಾರೆ.

ದಾಸರು ವಿಶಿಷ್ಟ ಉಡುಪು ಧರಿಸಿ ಮನೆಮನೆಗೆ ಹೋಗಿ ಹಾಡುತ್ತಿದ್ದರು. ಅಲ್ಲಿ ಭಕ್ತಿಪರವಶರಾಗಿ ಕುಣಿಯುತ್ತಲೂ ಇದ್ದರು. ಹೀಗೆ ಕಣ್ಣು ಹಾಗು ಕಿವಿಗಳನ್ನು ಸೆಳೆದು ಹೇಳಿದ ಇವರ ಮಾತು

ಗಳು ಕಲ್ಲೊಳಿಟ್ಟ ಅಕ್ಕರದಂತೆ ಜನರ ಮನಸ್ಸಿನಲ್ಲಿ ಶಾಶ್ವತ ಸ್ಥಾನ ಪಡೆದುಕೊಂಡವು. ಇಂದಿನ ಶಿಕ್ಷಣ ತಜ್ಞರು ದೃಕ್ ಶ್ರವಣ ಸಾಧನೆಗಳಿಗೆ ಕೊಡುತ್ತಿರುವ ಮಹತ್ವವನ್ನು ದಾಸರು ಎಂದೋ ಕೊಟ್ಟಿದ್ದರು. ಸಂಗೀತ ಹಾಗು ನೃತ್ಯ ಅವರ ಸಾಹಿತ್ಯದ ಅವಿಭಾಜ್ಯ ಅಂಗಗಳಾಗಿದ್ದುದನ್ನು ಇಂದಿನ ಶಿಕ್ಷಣ ತಜ್ಞರು ಗಮನಿಸಬೇಕು. ಇಂತಹ ಶಕ್ತಿಯುತ ಸಾಧನೆಗಳನ್ನು ದಾಸರು ಬಳಸಿದುದು ಗಮನಾರ್ಹವಾದುದು. ವ್ಯಕ್ತಿಯನ್ನು ತಿದ್ದಲು ಈ ಸಾಧನಗಳಿಂದ ಪ್ರತ್ಯಕ್ಷವಾಗಿ ಆಗದೇ ಹೋದರೂ ಅವನನ್ನು ತಿದ್ದುವಲ್ಲಿ ಇವುಗಳಿಂದಾದ ಅಪ್ರತ್ಯಕ್ಷ ನೆರವನ್ನು ಹಾಗು ಆ ನೆರವಿನ ಬೆಲೆಯನ್ನು ಯಾರೂ ಕಡೆಗಣಿಸಲಾರರು. ಸಂಗೀತ ಹಾಗು ನೃತ್ಯ ಇವು ಲಲಿತ ಕಲೆಗಳು. ಇವುಗಳಿಂದ ಸಿಗುವ ಸುಖವು ಇಂದ್ರಿಯಗಳ ಮೂಲಕವಾದುದು. ಭಕ್ತರೆನಿಸಿಕೊಳ್ಳುವವರು ಹೀಗೆ ಸುಖಪಡುವುದು ಸೂಕ್ತವೇ, ಎಂಬ ಪ್ರಶ್ನೆ ಉದ್ಭವಿಸಬಹುದು. ಹೀಗೆ ಪ್ರಶ್ನೆ ಕೇಳುವವರು ಇಂದ್ರಿಯ ಸುಖ ಆತ್ಮೋನ್ನತಿಗೆ ಮಾರಕವೆಂದು ಭಾವಿಸಿ ಹೀಗೆ ಕೇಳುತ್ತಿರಬೇಕು. ಮನುಷ್ಯ ಇಂದ್ರಿಯ ಸುಖಗಳಿಗೆ ಮಾರಹೋದಾಗ್ಗೆ, ಅವುಗಳ ಗುಲಾಮನಾದಾಗ್ಗೆ, ಅವುಗಳ ಸುಖಕ್ಕಾಗಿ ಉತ್ತಮವಾದುದನ್ನು ತೊರೆಯಲು ಸಿದ್ಧನಾದಾಗ್ಗೆ ಅವು ಅವನ ಪಾಲಿಗೆ ಮಾರಕವಾಗುವುವು. ಈ ಬಗೆಯ ಅಧೋಗತಿಯನ್ನು ದಾಸರು ಬೋಧಿಸಲಿಲ್ಲ. ಅವರ ಉದ್ದೇಶ ಅತ್ಯಂತ ಶ್ರೇಷ್ಠ ಹಾಗು ಪವಿತ್ರವಾದುದಾಗಿದ್ದಿತು. ಅವರು ಇಂದ್ರಿಯಗಳ ಸ್ವಭಾವ ಅರಿಯದವರಲ್ಲ. ಅವುಗಳನ್ನು ಎದುರು ಹಾಕಿಕೊಂಡು ಕೆಲಸ ಸಾಧಿಸುವುದು ಕಷ್ಟಸಾಧ್ಯವೆಂಬು

ದನ್ನು ಅವರು ಅರಿತಿದ್ದರು. ಅವುಗಳನ್ನು ಕಡೆಗಣಿಸುವುದರಿಂದ ಆಗುವ ಅಡಚಣೆಯನ್ನೂ ಅರಿತಿದ್ದರು. ಅವು ತಮ್ಮ ಕೆಲಸಗಳಲ್ಲಿ ಅಡ್ಡಬಾರದ ಹಾಗೆ ಸಾತ್ವಿಕ ರೀತಿಯಲ್ಲಿ ಅವುಗಳನ್ನು ತೃಪ್ತಿಪಡಿಸುತ್ತ ಆತ್ಮೋನ್ನತಿ ಪಡೆದುಕೊಳ್ಳುವುದನ್ನು ದಾಸರು ಪ್ರೋತ್ಸಾಹಿಸಿದರು. ಇಂದ್ರಿಯ ಸುಖ ವಸ್ತುತಃ ಹೀನವಾದುದಲ್ಲ. ಅದರ ಸ್ಥಾನಮಾನ ಸುಖಪಡೆಯುವ ಉದ್ದೇಶವನ್ನು ಅವಲಂಬಿಸಿದೆ. ಘನ ಉದ್ದೇಶ ಪ್ರಾಪ್ತಿಗಾಗಿ ಈ ಕಲೆಗಳನ್ನು ಬಳಸಿ ದಾಸರು ಅವುಗಳ ಹುಟ್ಟನ್ನು ಸಾರ್ಥಕಗೊಳಿಸಿದರು. "ಸಂಗೀತ ನೃತ್ಯಾದಿಗಳಿಂದ ಭಕ್ತಾತ್ಮನು ಭಗವಂತನ ಸಾನಿಧ್ಯಕ್ಕೆ ಹಾತೊರೆದಾಗ ಭಗವಂತನು ಗೋಚರಿಸುತ್ತಾನೆಂದು ದಾಸರ ನಂಬಿಕೆ. ಶ್ರೀಕೃಷ್ಣ ಪರಮಾತ್ಮನು ಸಾಮಗಾನಪ್ರಿಯ. ಆದುದರಿಂದ ಭಗವದ್ದರ್ಶನಕ್ಕೆ ಸಂಗೀತವೇ ಸೂಕ್ತಸಾಧನ. ಸಂಗೀತ ಸಾಹಿತ್ಯದ್ವಾರಪರಮಾತ್ಮನ ಸಾಕ್ಷಾತ್ಕಾರವಾಗುವುದೆಂದು ಹರಿದಾಸರ ದೃಢವಿಶ್ವಾಸ' (ಶ್ರೀ ಎಂ. ವಿ. ಕೃಷ್ಣರಾವ್ ಮತ್ತು ಶ್ರೀ ಎಂ. ಕೇಶವಭಟ್ಟ).

## ೪. ದಾಸ ಸಾಹಿತ್ಯ ಒಳಗೊಂಡುದೇನು ?

ಶ್ರೀ ಮಧ್ವಾಚಾರ್ಯರ ಅನುಯಾಯಿಗಳಾದ ಹರಿದಾಸರು ದ್ವೈತಮತದ ಸಿದ್ಧಾಂತದಲ್ಲಿ ಅಪಾರ ನಂಬಿಕೆಯುಳ್ಳವರಾಗಿದ್ದರೂ ಬಹುಮಟ್ಟಿಗೆ ಸ್ವತಂತ್ರ ವಿಚಾರವುಳ್ಳವರು. ಅವರೂ ಆ ಮತದಲ್ಲಿ ಅವರಿಗಿರುವ ಶ್ರದ್ಧೆ ಭದ್ರವಾದ ತಳಹದಿಯ

ಮೇಲೆ ನಿಂತಿರುವುದನ್ನು ಮರೆಯಲಾಗದು. ಆ ಮತದ ಪ್ರಕಾರ ಹರಿಯೇ ಸರ್ವೋತ್ತಮನೆಂದು ನಂಬಿದ ದಾಸರು ಆತನ ಸನ್ನಿಧಾನಕ್ಕಾಗಿ ಅಹರ್ನಿಶಿ ಶ್ರಮಿಸಿದರು. ಇದಕ್ಕಾಗಿ ಅವರು ಭಕ್ತಿಯ ಸುಲಭ ಹಾಗು ಸುರಕ್ಷಿತಮಾರ್ಗವನ್ನು ಅನುಸರಿಸಿದರು. ಈ ಭಕ್ತಿಯು ಅವರ ಜೀವನದ ಉಸಿರಾಯಿತು. ಅವರ ನಡೆ–ನುಡಿ, ಆಚಾರ–ವಿಚಾರ ಎಲ್ಲದರಲ್ಲೂ ಇದು ಹಾಸು ಹೊಕ್ಕಾಗಿ ವ್ಯಾಪಿಸಿತು. ಆದುದರಿಂದ ಅವರ ಸಾಹಿತ್ಯದಲ್ಲಿ ಏನನ್ನೇ ಕಂಡರೂ ಅದರಲ್ಲಿ ಸೂತ್ರರೂಪದಲ್ಲಿರುವ ಭಕ್ತಿಯನ್ನು ಕಂಡೇಕಾಣುತ್ತೇವೆ. ಈ ಕಾರಣಕ್ಕಾಗಿ ದಾಸಸಾಹಿತ್ಯವನ್ನು ಭಕ್ತಿ ಸಾಹಿತ್ಯವೆಂದು ಕರೆಯುತ್ತಾರೆ.

ಈ ಸಾಹಿತ್ಯವನ್ನು ದಾಸರು ಮಧ್ವಮತದ ಬೃಹತ್ ಪರಿಧಿಯೊಳಗೆ ಇದ್ದುಕೊಂಡೇ ರಚಿಸಿದರು. ಅದರೊಳಗೆ ಇವರು ಬಂಧಿತರಂತೆ ಇರದೆ ಕುರುಡರಂತೆ ತಡಕಾಡದೆ, ಎಲ್ಲವನ್ನು ಕಣ್ಣು ತೆರೆದು ನೋಡಿ ಸ್ವತಂತ್ರರೂ, ನಿರ್ಲಿಪ್ತರೂ, ವಸ್ತುನಿಷ್ಠರೂ ಆಗಿದ್ದುಕೊಂಡು ಇದನ್ನು ರಚಿಸಿದರು. ಆದುದರಿಂದ ನಗ್ನಸ್ವರೂಪದಲ್ಲಿ ಇವರಿಗೆ ಗೋಚರಿಸಿದ ಸತ್ಯವನ್ನು ಇವರ ಸಾಹಿತ್ಯದಲ್ಲಿ ಎಲ್ಲೆಲ್ಲೂ ಕಾಣುತ್ತೇವೆ.

ದಾಸಸಾಹಿತ್ಯವನ್ನು ಅವಲೋಕಿಸಿದಾಗ್ಗೆ ಅದರಲ್ಲಿ ದೇವತಾ ಪ್ರಾರ್ಥನೆ, ಇತರ ದೇವತೆಗಳ ಸ್ತೋತ್ರ, ಮಧ್ವಮತದ ಪ್ರಶಂಸೆ ದೇವರ ಅವತಾರಗಳು, ಕೃಷ್ಣಾವತಾರದ ಮಹಿಮೆ, ಜ್ಞಾನ, ಭಕ್ತಿ, ಲೋಕನೀತಿ, ಸಮಾಜ ಚಿತ್ರ, ಸಮಾಜ ಸುಧಾರಣೆ ಇತ್ಯಾದಿ

ವಿಷಯಗಳಿಗೆ ಸಂಬಂಧಿಸಿದ ಹಾಡುಗಳು ಕಾಣಸಿಗುತ್ತವೆ. ಲೋಕ ನೀತಿ, ಸಮಾಜ ಹಾಗು ಅದರ ಸುಧಾರಣೆ ಇವುಗಳಿಗೆ ಸಂಬಂಧಿಸಿದ ಹಾಡುಗಳನ್ನು ಪ್ರತ್ಯೇಕಿಸಿದಾಗ್ಗೆ ಅವುಗಳ ಸಂಖ್ಯೆ ಕಡಿಮೆ ಇದ್ದುದು ಗೊತ್ತಾಗುತ್ತದೆ.

ಈ ಹಿಂದೆ ಹೇಳಿದಂತೆ ದಾಸರು ದೇವರ ಪ್ರಾಪ್ತಿಗಾಗಿ ಭಕ್ತಿಯನ್ನವಲಂಬಿಸಿದ್ದರು. ಅವರು ಸಂಸಾರದ ವ್ಯಾಮೋಹವನ್ನು ತೊರೆದು ಸರ್ವಸ್ವವನ್ನು ತ್ಯಜಿಸಿ, ಜೀವನದ ಏಕಮೇವ ಗುರಿಯ ಪ್ರಾಪ್ತಿಗಾಗಿ ಕಟಿಬದ್ಧರಾದ ಪೂರ್ಣಾವಧಿಯ ಭಕ್ತರಾಗಿದ್ದರು. ಆದುದರಿಂದ ಅವರು ರಚಿಸಿದ ಹಾಡುಗಳಲ್ಲಿ ದೇವರು ಹಾಗು ಭಕ್ತಿಗೆ ಸಂಬಂಧಿಸಿದವುಗಳನ್ನು ಹೆಚ್ಚಾಗಿ ಕಾಣುತ್ತೇವೆ–ಹೀಗಿದ್ದರೂ ಅವರು ಸಮಾಜವನ್ನು ಕಡೆಗಣಿಸಲಿಲ್ಲ. ತಮ್ಮಂತೆ ಸಮಾಜದ ಪ್ರತಿಯೊಬ್ಬ ವ್ಯಕ್ತಿ ಆತ್ಮೋದ್ಧಾರ ಮಾಡಿಕೊಳ್ಳಲಿ ಎಂಬ ಹಂಬಲ ಅವರಲ್ಲಿದ್ದಿತು. ಆದ್ದರಿಂದ ಸಮಾಜೋದ್ಧಾರಕ್ಕೆ ಸಂಬಂಧಿಸಿದ ಹಲವು ಹಾಡುಗಳನ್ನು ರಚಿಸಿದರು. ದೇವರಿಗೆ ಸಂಬಂಧಿಸಿರಲಿ, ಮತಕ್ಕೆ ಸಂಬಂಧಿಸಿರಲಿ ಅಥವಾ ಸಮಾಜಕ್ಕೆ ಸಂಬಂಧಿಸಿರಲಿ ಈ ಎಲ್ಲಾ ಹಾಡುಗಳ ರಚನೆಯ ಉದ್ದೇಶ ಜನಸಾಮಾನ್ಯರ ಉದ್ಧಾರ ಮಾಡುವದೇ ಆಗಿದ್ದಿತು. "ಹರಿದಾಸರು ಉಚ್ಚತರಗತಿಯ ಸಮಾಜ ಸುಧಾರಕರು. ಇವರು ಜನಾಂಗದ ಕಲ್ಯಾಣಕ್ಕಾಗಿ ತಮ್ಮ ಜ್ಞಾನ ಮತ್ತು ಅನುಭವದ ತಿರುಳನ್ನೇ ತಮ್ಮ ಸಾಹಿತ್ಯದಲ್ಲಿ ಹುದುಗಿಸಿ ಜನತೆಗೆ ನೀಡಿರುವರು" (ಡಾ॥ ಹೆಚ್. ಕೆ. ವೇದವ್ಯಾಸಾಚಾರ್ಯರು) ಈ ಸಾಹಿತ್ಯದಿಂದ ಜನತೆಯಲ್ಲುಂಟಾಗುವ ಸುಧಾರಣೆ ತಾತ್ಕಾಲಿಕ ಹಾಗು

ಮೇಲ್ಮೈಯದಾಗಿರದೆ ಆಮೂಲಾಗ್ರವೂ ಶಾಶ್ವತವೂ ಮಹತ್ವದ್ದೂ ಆಗಿರುತ್ತದೆ.

## ೯. ದಾಸ ಸಾಹಿತ್ಯ ಹಾಗೂ ಸಮಾಜ ಸುಧಾರಣೆ

ಹರಿದಾಸರು ಸಮಾಜ ಶಾಸ್ತ್ರಜ್ಞರಲ್ಲ. ಅವರಂತೆ ಸಮಾಜದ ಕುಂದುಕೊರತೆ, ರೋಗರುಜಿನ ಮುಂತಾದವುಗಳ ವ್ಯವಸ್ಥಿತ ಪಟ್ಟಿತಯಾರಿಸಿ ಅವುಗಳ ನಿವಾರಣೋಪಾಯಗಳನ್ನು ಕ್ರಮವಾಗಿ ಸೂಚಿಸಿದವರಲ್ಲ. ಸಮಾಜ ಸುಧಾರಣೆ ಅವರ ಜೀವನದ ಗುರಿಯಾಗಿರಲಿಲ್ಲ. ಅದಕ್ಕಾಗಿ ತಮ್ಮ ಜೀವನವನ್ನು ಮೀಸಲಾಗಿಟ್ಟವರೂ ಅಲ್ಲ. ಆದರೂ ಅವರನ್ನು ಸಮಾಜ ಸುಧಾರಕರಲ್ಲ ಎಂದು ಕರೆಯಲಾಗದು. ಅವರಂಥ ಸುಧಾರಕರು ಸಿಗುವುದು ವಿರಳ. ಅವರ ಜೀವನದ ಗುರಿ ಆತ್ಮೋನ್ನತಿ ಎಂಬುದನ್ನು ಈ ಹಿಂದೆ ಗಮನಿಸಲಾಗಿದೆ. ತಮ್ಮಂತೆ ಇತರರೂ ಆತ್ಮೋನ್ನತಿಹೊಂದಲಿ ಎಂಬುದು ಅವರ ಹೆಬ್ಬಯಕೆ. ಆದ್ದರಿಂದ ಅದಕ್ಕಾಗಿ ಶ್ರಮಿಸುವುದು ತಮ್ಮ ಕರ್ತವ್ಯವೆಂದು ಭಾವಿಸಿದರು. ಅವರು ನಿಷ್ಕಾಮಿಗಳಾಗಿ, ಭಕ್ತರಾಗಿ, ಸಂಸಾರದಿಂದ ನಿರ್ಲಿಪ್ತರಾಗಿ, ನಿಷ್ಕಪಟಿಗಳಾಗಿ ಅತ್ಯಂತ ಕಳಕಳಿ, ಅನುಕಂಪ ಹಾಗು ಕರ್ತವ್ಯ ಬುದ್ಧಿಯಿಂದ ಸಮಾಜದ ಏಳಿಗೆಗಾಗಿ ಶ್ರಮಿಸಿದರು. ಆತ್ಮೋನ್ನತಿಗೆ ಅಡ್ಡಿಯಾಗುವಂಥ ಸಮಾಜಿಕ ಲೋಪದೋಷ ಹಾಗೂ ಕುಂದುಕೊರತೆಗಳನ್ನು ಎತ್ತಿ ತೋರಿಸಿ ತಮ್ಮವೇ ಆಗಿರುವ ಅಮೂಲ್ಯನಿವಾರಣೋಪಾಯಗಳನ್ನು ಸೂಚಿಸಿದರು.

ಜನರು ಭಕ್ತಿ ಹಾಗು ಧರ್ಮ ಮಾರ್ಗವನ್ನನುಸರಿಸಿ ತಮ್ಮಂತೆ ಭಗವದನುಗ್ರಹಕ್ಕೆ ಪಾತ್ರರಾಗಬೇಕೆಂಬುದು ದಾಸರ ಹೆಬ್ಬಯಕೆ. ಇಂಥ ಮಾರ್ಗಕ್ಕೆ ಜನರನ್ನು ಹಚ್ಚುವುದು ಅಷ್ಟು ಸುಲಭವಾದ ಕೆಲಸವಲ್ಲ. ಇದಕ್ಕಿರುವ ಅಡ್ಡಿ ಆತಂಕ ಹಾಗು ಎಡರುತೊಡರುಗಳು ನೂರಾರು ಆಸೆ, ಆಸಕ್ತಿ, ಅಜ್ಞಾನ, ಭ್ರಮೆ. ಮಾಯೆ, ಮೋಹ ಮುಂತಾದ ಆತಂಕಗಳನ್ನು ದೂರಮಾಡದೆ ಜನರನ್ನು ಈ ಮಾರ್ಗದಲ್ಲಿ ಅನಾಯಾಸವಾಗಿ ಕರೆದುಕೊಂಡು ಹೋಗುವುದು ಅಸಾಧ್ಯವೆಂಬುದನ್ನು ದಾಸರು ಅರಿತಿದ್ದರು. ಆದ್ದರಿಂದ ಇವುಗಳನ್ನೂ ನಿವಾರಿಸಲು ಅವರು ಶ್ರಮಿಸಿದರು. ಈ ಸನ್ಮಾರ್ಗದಲ್ಲಿ ಅಡ್ಡಬಾರದಂಥ ಸಾಮಾಜಿಕ ಲೋಪದೋಷ ಗಳು ಹಲವಾರು ಇದ್ದಿರಬಹುದಾದರೂ ಅತ್ತಕಡೆ ದಾಸರು ತಮ್ಮ ಗಮನಹರಿಸಲಿಲ್ಲ. ತಮ್ಮ ಉದ್ದೇಶಕ್ಕೆ ಬೇಕಾಗುವಷ್ಟು ಗಮನವನ್ನು ಸಂಬಂಧಿಸಿದ ಲೋಪದೋಷಗಳಿಗೆ ಸೀಮಿತಗೊಳಿ ಸಿದರು.

ಸಾಮಾಜಿಕ ಸಮಸ್ಯೆಗಳ ನಿವಾರಣೆಯ ಇವರ ಉಪಾ ಗಮನವೇ ಬೇರೆ ತೆರನಾಗಿದ್ದಿತು. ಉದಾಹರಣೆಗೆ ಜನರ ಬಡತನ ವನ್ನೆ ತೆಗೆದುಕೊಳ್ಳಬಹುದು. ಒಬ್ಬ ಅಪ್ಪಟ ಸಮಾಜ ಸುಧಾ ರಕ ಅದನ್ನು ದೂರಮಾಡಿ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಲು ಯಾವ ವಿಶಿಷ್ಟ ಉಪಾಯಗಳನ್ನು ಸೂಚಿಸಬಹು ದಾಗಿತ್ತೊ ಆ ಬಗೆಯ ಉಪಾಯಗಳನ್ನು ದಾಸರು ಸೂಚಿಸ ಬಹುದೆಂದು ನಿರೀಕ್ಷಿಸುವುದು ತಪ್ಪು. ಅವರು ಬಡತನವನ್ನು ಶಾಪವೆಂದು ಎಂದೂ ಬಗೆದಿರಲಿಲ್ಲ. ಇದರ ವಿರುದ್ಧವಾಗಿ.

ದೇವರ ಸ್ಮರಣೆಯನ್ನು ಭಕ್ತನ ಹೃದಯದಲ್ಲಿ ಸದಾ ನೆಲೆಸುವಂತೆ ಮಾಡುವಲ್ಲಿ ಅದು ಸಹಕಾರಿಯೆಂದು ಭಾವಿಸಿದರು. ಆದುದ ರಿಂದ ವಿಜಯದಾಸರು

ಬಡತನ ಬಂದರೆ ಹಿಗ್ಗು ತಲಿರಬೇಕು ।
ಹೊನ್ನು ಹಣವ ಕೊಡಲಿಬೇಡ ।
ಮನ್ನಣೆಯ ಮಾಡಿಸಬೇಡ ।
ಎನ್ನದೆಂಬೋ ಮಾತು ಎಂದೆಂದಿಗೂ ಬೇಡ ।
ನಿನ್ನವನು ನಿನ್ನವನು ನಿನ್ನವನೆಂದೆನಿಸಿ ।
ಮನ್ನಿಸಿ ಪಾಲಿಸೈ ವಿಜಯ ವಿಠಲಾ ॥

ಎಂದು ದೇವರನ್ನು ಬೇಡಿದರು. ಪುರಂದರ ದಾಸರಂತೂ "ರೌದ್ರ ದಾರಿದ್ರ್ಯವು ರಾಘವನಡಿಗೆನ್ನಿ" ಎಂದು ಹಾಡಿದರು. ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ ಕನಕದಾಸರು

ಗಳಿಸದಿರು ಸೀಮೆಯನು. ಗಳಿಸದಿರು ದ್ರವ್ಯವನು ।
ಗಳಿಸದಿರು ನೀ ದುರಿತ ರಾಶಿಗಳನು ।
....................................
ನಳಿನನಾಭನ ದಿವ್ಯನಾಮವನು ನೆನೆದು
ನೆಲೆಯಾದ ಪರಮಪದವಿಯ ಪಡೆಯೊ ಮನುಜ ।

ಎಂದು ಹೇಳಿ ದ್ರವ್ಯವನ್ನು ದುರಿತ ರಾಶಿಗಳಲ್ಲಿ ಸೇರಿಸಿದರೇ ಹೊರತು ಬಡತನವನ್ನು ಶಾಪವೆಂದು ಪರಿಗಣಿಸಲಿಲ್ಲ.

ಸಮಸ್ಯೆ ಒಂದೇ ಆದರೂ ಪರಿಹಾರೋಪಾಯಗಳು, ಜನರ ದೃಷ್ಟಿಕೋನ, ಯೋಗ್ಯತೆ, ಮಾನಸಿಕಸ್ಥಿತಿ, ವಿಷಯಜ್ಞಾನ

ಮುಂತಾದವುಗಳಿಂದಾಗಿ, ಭಿನ್ನವಾಗಿರುತ್ತವೆ. ಮುಕ್ತಿಗೆ ಪ್ರಧಾನ ಸ್ಥಾನ ಕೊಟ್ಟಿರುವ ಭಕ್ತಿ, ಜ್ಞಾನ ಹಾಗು ವೈರಾಗ್ಯ ಇವುಗಳಿಂದ ಕೂಡಿದ ದಾಸರು ಸೂಚಿಸುವ ಪರಿಹಾರಗಳು ಏನೆಂಬುದನ್ನು ಯಾರಾದರೂ ಊಹಿಸಬಹುದಾಗಿದೆ. ಇದೆಲ್ಲವನ್ನು ಗಮನಿಸಿದಾಗ್ಗ. ದಾಸರ ಹಾಡುಗಳಲ್ಲಿ ವೈವಿಧ್ಯವಿದ್ದರೂ ಗುರಿಯುತ್ತ ಸಾಗುವ ಏಕತೆಯಿದೆಯೆಂಬುದನ್ನು ಕಾಣುತ್ತೇವೆ. ಇಹವನ್ನು ಕಡೆಗಣಿಸದ, ತ್ಯಜಿಸದ, ತುಚ್ಛೀಕರಿಸದ ಮತ್ತು ಪರಕ್ಕೆ ಕರೆದೊಯ್ಯುವ ಸಾಹಿತ್ಯವನ್ನು ದಾಸರು ಜನತೆಗೆ ನೀಡಿದರು. ಆದ ಕಾರಣ ಧರ್ಮದ ಭದ್ರತಳಹದಿಯ ಮೇಲೆ ಆದರ್ಶ ಸಮಾಜ ಕಟ್ಟಲು ಈ ಸಾಹಿತ್ಯದಿಂದ ಸಾಧ್ಯವಾಯಿತು. "ಈ ದಿನ ನಾವು ಸಾಹಿತ್ಯದ ಮೂಲಕ ಸಮಾಜವನ್ನು ಉದ್ಧರಿಸಬೇಕು ಎಂಬುದಾಗಿ ಆಗಿಂದಾಗ್ಗೆ ಹೇಳುತ್ತಲೆ ಇದ್ದೇವೆ. ಈ ದೃಷ್ಟಿಯಾಗಲಿ ಈ ದಾರಿಯಾಗಲಿ ಇಂದಿನದಲ್ಲ; ಬಹಳ ಹಳೆಯದು. ಪುರಾತನರು ಧರ್ಮದ ಹೆಸರಿನಲ್ಲಿ ಸಮಾಜವನ್ನು ಸಂಸ್ಕರಿಸಿದರು: ಸಮಾಜಕ್ಕೆ ಸೇರಿದ ವ್ಯಕ್ತಿಯ ಆಗುಹೋಗುಗಳನ್ನು ಕುರಿತು ಜಿಜ್ಞಾಸೆ ನಡೆಸಿದರು; ಮನುಷ್ಯನ ಬದುಕು ಉತ್ತಮವಾಗಲೆಂಬ ಉದ್ದೇಶದಿಂದ ನೀತಿಯನ್ನು ಬೋಧಿಸಿದರು; ದೈವಭಕ್ತಿಯನ್ನು ಬಿತ್ತಿದರು. ಇಂತಹ ಮಹತ್ವದ ಕಾರ್ಯದಲ್ಲಿ ಯಶಸ್ವಿಯಾದವರಲ್ಲಿ ಹರಿದಾಸರ ಗುಂಪು ಅಗ್ರಪಂಕ್ತಿಯಲ್ಲಿ ಸೇರುತ್ತದೆ" (ಡಾ। ಜಿ. ವರದರಾಜರಾವ್).

# ೧೦. ದಾಸರು ಕೈಗೊಂಡ ಕುಲದ ಉದ್ಧಾರ

ವಿಷಯಾಸಕ್ತಿ, ಅರ್ಥಹೀನ ಸಂಪ್ರದಾಯ, ಮೂಢನಂಬಿಕೆ ಅನೈತಿಕತೆ, ಅಜ್ಞಾನ ಮುಂತಾದವುಗಳ ಕಪಿಮುಷ್ಟಿಯಲ್ಲಿ ಸಿಲುಕಿದ ಜನರು ಭಕ್ತಿ ಹಾಗು ಧರ್ಮಮಾರ್ಗಾವಲಂಬಿಗಳಾಗುವುದು ಅಪರೂಪ. ಆಕಸ್ಮಾತ್ತಾಗಿ ಈ ಮಾರ್ಗ ಹಿಡಿಯುವ ಬಯಕೆ ಉಂಟಾದರೂ ಅವರು ಭ್ರಾಂತಿ, ಮೋಹ, ಮಾಯೆ ಹಾಗು ಅಜ್ಞಾನಗಳಿಂದಾಗಿ ಬೇರೊಂದು ಮಾರ್ಗವನ್ನೇ ಈ ಮಾರ್ಗವೆಂದು ಭ್ರಮಿಸಿ ದಾರಿ ತಪ್ಪುವುದು ಹೆಚ್ಚು. ಇಂಥವರು ಹೆಚ್ಚಾಗಿರುವ ಸಮಾಜದಲ್ಲಿ ಸೂಕ್ತ ವಾತಾವರಣವನ್ನುಂಟು ಮಾಡಲು ದಾಸರು ಕಣಕ್ಕೆ ಇಳಿಯಬೇಕಾಯಿತು. ಅದರ ಫಲವಾಗಿ ಮೂಢನಂಬಿಕೆಗಳು ಮಣ್ಣುಮುಕ್ಕಿದುವು. ಅರ್ಥಹೀನ ಸಂಪ್ರದಾಯಗಳು ಕಾಲುಕಿತ್ತಿದುವು. ಅನೈತಿಕತೆ ಪಲಾಯನಗೈದಿತು. ಅಜ್ಞಾನ ಅಡವಿ ಪಾಲಾಯಿತು. ಇಂತಹ ಗತಿಯನ್ನು 'ಕುಲ'ವೂ ಅನುಭವಿಸಿತು. ಕುಲದ ಬಗ್ಗೆ ಜನರಲ್ಲಿ ಅನೇಕ ತಪ್ಪು ಕಲ್ಪನೆಗಳು ಉಂಟಾಗಿದ್ದುವು. ಅದು ಜನರನ್ನು ಒಂದುಗೂಡಿಸುವ ಹಾಗು ಅವರಲ್ಲಿ ಸಾಮರಸ್ಯವನ್ನುಂಟು ಮಾಡುವ ಸೂತ್ರವಾಗಿ ಉಳಿದಿರಲಿಲ್ಲ. ಅದು ಜನರಲ್ಲಿ ಭೇದವನ್ನು ಹುಟ್ಟಿಸಿ ಕೀಳುಮೇಲು ಎಂಬ ಭಾವನೆ ಬೆಳಸಿದ್ದಿತು. ಜನರು 'ಕುಲ'ವನ್ನು ಕುಲವೆಂದು ತಿಳಿಯದೆ ಬೇರೊಂದನ್ನು ಕುಲವೆಂದು ಭಾವಿಸಿದ್ದರು. ಈ ತಪ್ಪು ಕಲ್ಪನೆಯನ್ನು ಹೋಗಲಾಡಿಸಿ, ಸರಿಯಾದ ಅರ್ಥ ತಿಳಿಸಿ ಜನರನ್ನು ಸರಿಯಾದ ದಾರಿಗೆ ಹಚ್ಚುವುದು

ದಾಸರಿಗೆ ಅಗತ್ಯವೆನಿಸಿತು. ಅವರು ಜನರಲ್ಲಿರುವ ತಪ್ಪು ಕಲ್ಪನೆಯನ್ನು ವಿರೋಧಿಸಿದರೇ ಹೊರತು 'ಕುಲ'ವನ್ನಲ್ಲ. ಒಂದು ಸದುದ್ದೇಶಕ್ಕೆ ಜನ್ಮತಳೆದ ಕುಲವು ಸಮಾಜವನ್ನು ಒಡೆದು ವಿಚ್ಛಿದ್ರಗೊಳಿಸುವ ಮಾರಕವಸ್ತು ಆಗಬಾರದಾಗಿತ್ತು. ಅದು ಅಂಥ ವಸ್ತುವಾಗಿದ್ದರೆ ಧರ್ಮದಲ್ಲಿ ಅದಕ್ಕೆ ಸ್ಥಾನವಿರುತ್ತಿರಲಿಲ್ಲ. ಸಮಾಜದಿಂದಲೂ ಅದಕ್ಕೆ ಮನ್ನಣೆ ಸಿಗುತ್ತಿರಲಿಲ್ಲ. ಅದು ಅಜ್ಞ ಹಾಗು ದುರಭಿಮಾನಿಗಳ ಕೈಯಲ್ಲಿ ಬಿದ್ದು ಉತ್ತಮ ಫಲಗಳನ್ನು ಕೊಡದ ಮಾರಕವಸ್ತುವಾಗಿ ಪರಿಣಮಿಸಿತು. ಉದ್ದೇಶ ಕಣ್ಮರೆಯಾದಾಗ್ಗೆ ಏರ್ಪಾಟು ಜೀವ ತೊಲಗಿದ ದೇಹದಂತೆ ತ್ಯಾಜ್ಯವಾಗುತ್ತದೆ. ಕುಲಕ್ಕೆ ದಾಸರ ಕಾಲದಲ್ಲಿ ಈ ಗತಿ ಉಂಟಾಗಿತ್ತೆಂದು ಅವರ ಹಾಡುಗಳಿಂದ ತಿಳಿದುಬರುತ್ತದೆ. ಯಾವ ಒಂದು ಏರ್ಪಾಟು ಎಲ್ಲಾ ಕಾಲಕ್ಕೂ ಉಪಯುಕ್ತವಾಗಿ ಇರಲೇಬೇಕಾಗಿಲ್ಲ. ನಿರುಪಯುಕ್ತ ಏರ್ಪಾಟಿನಲ್ಲಿ ಅವಶ್ಯಕತೆ ಹಾಗೂ ಕಾಲಕ್ಕೆ ತಕ್ಕಂತೆ ಸೂಕ್ತಮಾರ್ಪಾಟು ಮಾಡಬೇಕಾಗುತ್ತದೆ. ದಾಸರು ಸಾಂಪ್ರದಾಯಿಕ ಕುಲದ ಮೌಲ್ಯಮಾಪನ-ವನ್ನಷ್ಟೇ ಮಾಡದೆ ನಿಜವಾದ ಕುಲವಾವುದೆಂಬುದನ್ನು ತೋರಿಸಿ ಕೊಟ್ಟರು. ಅಲ್ಲದೆ ಕುಲಕ್ಕೆ ನವೀನಾರ್ಥವನ್ನೂ ಕೊಟ್ಟರು. "ಮತವನ್ನು ಮೀರಿದ ನೀತಿಧರ್ಮ, ಮಾನವನ ಮೌಲ್ಯಗಳು ಇವನ್ನು ದಾಸರು ಆರಿತವರಾಗಿದ್ದರು: ಇವಕ್ಕೆ ಹೆಚ್ಚಿನ ಬೆಲೆ ಕೊಡುವವರಾಗಿದ್ದರು. ಇವಿಲ್ಲದೆ ತಮ್ಮ ಮತವೇ ಇರಲಿ ಅದನ್ನು ಅವರು ಒಪ್ಪುವವರಲ್ಲ' ಎಂದು ಶ್ರೀ ರಂ. ಶ್ರೀನಿವಾಸಗೌಡ ಯವರು ಹೇಳಿದ ಮಾತುಗಳನ್ನು ಇಲ್ಲಿ ಸ್ಮರಿಸಬಹುದು.

...ಲದ ವಿಚಾರದಲ್ಲಿ ಕ್ರಾಂತಿಯನ್ನುಂಟುಮಾಡಿದ ಕನಕದಾಸರು

ಕುಲಕುಲವೆನ್ನುತಿಹರೇ ಕುಲಯಾವುದು ನೋಡಿ
ಸತ್ಯ ಸಜ್ಜನಕೆ ।
ಕೆಸರೊಳಗೆ ತಾವರೆ ಪುಟ್ಟಲು ಅದತಂದು ।
ಬಿಸಜನಾಭನಿಗರ್ಪಿಸಲಿಲ್ಲವೇ ?
ಹಸುವಿನ ಮಾಂಸದೊಳುದಿಸಿದ ಕ್ಷೀರವ ।
ವಸುಧೆಯೊಳಗೆ ಭೂಸುರರುಣಲಿಲ್ಲವೆ ? ।
ಮೃಗಗಳ ಮೈಯಲ್ಲಿ ಪುಟ್ಟಿದ ಕಸ್ತೂರಿ ।
ತೆಗೆದು ಪೂಸುವರು ವಿಬುಧರೆಲ್ಲಾ ।

...ಮು ಹೇಳಿ ಹುಟ್ಟಿನಿಂದ ಬಂದ ಕೀಳ್ತನವು ಗುಣಗಳಿಂದ ಮಾರು...ಾಗಿ ಶ್ರೇಷ್ಠತೆಯು ಲಭಿಸುತ್ತದೆಯೆಂಬುದನ್ನೂ ತೋರಿಸಿ...ಟ್ಟಿರು. ಕುಲಜನಾರು ಎಂಬುದಕ್ಕೆ ಅವರು.

ಸಿರಿ ಕಾಗಿನೆಲೆಯಾದಿಕೇಶವರಾಯನ ।
ಚರಣ ಕಮಲವ ಕೀರ್ತಿಸುವವನೆ ಕುಲಜ ।

...ಮು ಹೇಳಿ ಜನ್ಮದಿಂದ ಬಂದ ಕುಲಕ್ಕಿಂತ ಗುಣದಿಂದ ಬಂದ ...ವೇ ಶ್ರೇಷ್ಠವೆಂಬುದನ್ನು ತೋರಿಸಿಕೊಟ್ಟರು.

ಪುರಂದರದಾಸರು ಸಹಿತ ಗುಣ ಹಾಗು ಕರ್ಮಗಳಿಗೆ ...ಷ್ಟನ ಪ್ರಾಶಸ್ತ್ಯವನ್ನು ಕೊಟ್ಟರೇ ಹೊರತು ಹುಟ್ಟಿನಿಂದ ...ದ ಕುಲಕ್ಕಲ್ಲ. "ಆವ ಕುಲವಾದರೇನು, ಆವ ನಾದರೇನು. ...ಭಾವಪರಿತಮೇಲೆ ?" ಎಂದು ಅವರು ಕೇಳಿದ ಮಾತು ...ಕ್ಕೆ ಸಾಕ್ಷಿಯಾಗಿದೆ. ತಮ್ಮ ಈ ಮಾತನ್ನು ಸಮರ್ಥಿಸಲು ...ರು

"ಹಸಿಕಬ್ಬುಡೊಂಕಿರಲು ಅದರ ರಸಡೊಂಕೇನೋ......

.........................................

ನಾನಾವರ್ಣದ ಆಕಳು । ಅದು । ನಾನಾವರ್ಣದ
ಕ್ಷೀರವೇನೋ

ಎಂದು ಕೇಳಬೇಕಾಯಿತು. ದಾಸರು ಕುಲದಿಂದ ನೀಚನೆನಿ ಕೊಳ್ಳಬಹುದಾದ ವ್ಯಕ್ತಿ ಗುಣಗಳಿಂದ ಶ್ರೇಷ್ಠನೆನಿಸಿಕೊಳ್ಳಬ ನೆಂಬುದನ್ನು ಮನದಟ್ಟಾಗುವಂತೆ ತೋರಿಸಿಕೊಟ್ಟರು. ಸಾಂಪ್ರ ದಾಯಿಕ ಕುಲವನ್ನು ಎತ್ತಿಹಿಡಿಯುವ ಮನುಜನನ್ನು ಕುರಿತ ಅವರು

'ಕುಲದ ಮೇಲೆ ಹೋಗಬೇಡ । ಮನುಜ ।
ಕುಲವಿಲ್ಲ ಜ್ಞಾನಿಗಳಿಗೆ ।

ಪುರಂದರ ವಿಠಲನ ಪದವ ಸೇವಿಸಿ ಮುಕ್ತನಾಗಲಿ ।

ಎಂದು ಬೋಧಿಸಿದರು.

ಅಂದಿನ ದಾಸಕೂಟದಲ್ಲಿ ಜನ್ಮದಿಂದ ಬಂದ ಕುಲ ಕಾರಣವಾಗಿ ಅಸ್ಪೃಶ್ಯರೆನಿಸಿಕೊಳ್ಳಬಹುದಾದ ಕನಕದಾಸರಿಗೆ ಸಿ ಸ್ಥಾನಮಾನವನ್ನು ನೋಡಿದಾಗ್ಗೆ ದಾಸರು ನಡೆದುದ್ದನ್ನೇ ಬೋ ಸಿರುವುದನ್ನು ಕಾಣುತ್ತೇವೆ. "ಜನ್ಮತಃ ಚಂಡಾಲರಾಗಿರುವವ ಗಿಂತಲೂ ಕರ್ಮತಃ ಚಂಡಾಲರಾಗಿರುವವರು ನೀಚರೆಂದ ದಾಸರು ಭಾವಿಸಿದ್ದರು" (ಬೇಲೂರು ಕೇಶವದಾಸ) ಸಮಾ ವನ್ನು ಒಡೆದು ಚೂರು ಚೂರು ಮಾಡಬಹುದಾಗಿದ್ದ 'ಕುಲ' ತಪ್ಪುಕಲ್ಪನೆಯನ್ನು ದೂರಮಾಡಿ ಸಮಾಜದಲ್ಲಿ ಐಕ್ಯತೆಯನ್ನುಂ ಮಾಡುವ ಅವರ ಮಾತುಗಳು ಸಮಾಜಕ್ಕೆ ನೀಡಿದ ಅತ್ಯಮೂ ಕಾಣಿಕೆಯಾಗಿವೆ.

# ೧೧. ಹೊಲೆತನದ ನಿವಾರಣೆ

ಸತ್ಯವರ್ತಿಯೂ, ಜ್ಞಾನಿಯೂ, ಗುಣಶಾಲಿಯೂ ಆದ
ಯೇ ಕುಲಜನೆಂದು ಸಾರಿದ ದಾಸರು ದುಷ್ಟವರ್ತಿ, ಅಜ್ಞಾನಿ
ಗೂ ದುರ್ಗುಣಿಯನ್ನು ಹೊಲೆಯನೆಂದು ಕರೆಯಲು ಹಿಂಜ
ಲಿಲ್ಲ. ಊರ ಹೊರಗೆ ಹೊಲೆಯ ಇರುತ್ತಾನೆಂದು
ಮಾನ್ಯ ಜನರ ತಿಳಿವಳಿಕೆ. ಇವನು ಹುಟ್ಟಿನಿಂದ ಹೊಲೆಯನು.
ಕುಲದವರು ಇವನನ್ನು ಅಸ್ಪೃಶ್ಯನೆಂದು ದೂರ ಇಟ್ಟರು.
ಹೊಲೆಯನಲ್ಲಿ ಹೊಲೆತನವಿರಬೇಕೆಂಬ ಕಟ್ಟಳೆಯೇನಿಲ್ಲ.
ಲೆಯನಲ್ಲದವನಲ್ಲಿ ಅದ ರಂತೆ, ಹೊಲೆತನ ಇರಕೂಡದೆಂಬ
ಂಧವೇನಿಲ್ಲ. ಊರ ಹೊರಗಿರುವ ಹೊಲೆಯನು ಒಳ್ಳೆಯ
ತೆಯಿಂದ ಮುಕ್ತಿಗೆ ಅರ್ಹನಾಗುವಂತೆ ಊರೊಳಗಿರುವ
ಜನು ಆಂತರಿಕ ಹೊಲೆತನದಿಂದ ಹೊಲೆಯನಿಗಿಂತಲೂ
ನೆಂದೆನಿಸಿ ಮುಕ್ತಿಗೆ ಅರ್ಹನಾಗಲೂಬಹುದು. ಊರ ಒಳ
ಹೊಲೆಯರ ಬಗ್ಗೆ ಪುರಂದರದಾಸರು

ಹೊಲೆಯ ಹೊರಗಿಹನೆ ಊರೊಳಗಿಲ್ಲವೆ ।
ಶ್ರೀ ಹರಿಯ ಸ್ಮರಣೆಯನು ಬಲ್ಲವರೆ ಪೇಳಿ ।

ಸು ಭಕ್ತರನ್ನು ಕೇಳಿದರು. 'ಶೀಲವನು ಕೈಗೊಂಡು ನಡೆಸ
ನು, ಆಳಾಗಿ ಅರಸನಿಗೆ ಕೇಡು ಬಗೆವವನು, ಸೂಳೆಯನು
ಸುವವನು, ಕೊಂಡಸಾಲವನು ತಿದ್ದದಾತನು, ಉಂಡ
ಗೆರಡು ಬಗೆವಾತನು, ಹೆಂಡತಿಯ ಇಚ್ಛೆಯವನು, ಇದ್ದಾಗ
ಧರ್ಮ ಮಾಡದವನು ಮುದ್ದಿಕ್ಕಿ ಕೊಲ್ಲುವವನು, ಆಸೆ

ಮಾತನು ಕೊಟ್ಟು ಭಾಷೆ ತಪ್ಪುವವನು, ಲೇಸು ಉಪಕಾರ ಮಾಡದವನು, ಹುಸಿಬೊಗಳುವವನು, ಆರಿತ ಆಚಾರವನು ನಡೆಸದಾತನು, ಇವರೆಲ್ಲರು ಊರೊಳಗೆ ಇದ್ದರೂ ಹೊಲೆಯರೇ ಎಂದು ದಾಸರು ಸಾರಿದರು.

ಇದೇ ಬಗೆಯ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ ವಿಜಯದಾಸರು,

ನಿರ್ಮಲ ಕೋಪವಕಳೆಯಲರಿಯದವ ಹೊಲೆಯ ।
ಬಳಗ ಬರಲು ಬಿಟ್ಟು ಒಳಗೆ ಉಂಬವ ಹೊಲೆಯ ।
ಹೊನ್ನು ಹಣಗಳಿಸಿ ಕೂಡಿದವನೆ ಹೊಲೆಯ ।
ಹೆಣ್ಣಿನ ಬಣ್ಣಕೆ ಸೋಲುವವನೆ ಹೊಲೆಯ ।
ಉಣ್ಣಲಿಕ್ಕೆ ಹಿಂದೆ ಹಂಗಿಸುವವನೆ ಹೊಲೆಯ ।
ಸವತಿಯ ಮೇಲೆ ಮೃಗಳ ಕೊಡುವವನೆ ಹೊಲೆಯ ।
ಪಿತಮಾತಾ ಗುರುಗಳ ಬೈಯುವವನೆ ಹೊಲೆಯ ।

ಎಂದು ಘೋಷಿಸಿದರು. ಅವರು ಬೇರೊಂದೆಡೆ ಯಾರು ಹೊಲತಿಯೆಂಬುದನ್ನು ಹೇಳುತ್ತಾ,

"ಹೊಲತಿ ಮತ್ತ್ಯಾವಳೂ ಹೊಲಗೇರಿಯೊಳಗಿಲ್ಲ ।
ಹೊಲಗೇರಿಯಲ್ಲಿದ್ದ ಹೊಲತಿ ಹೊಲತಿಯಲ್ಲ ।

ಎಂದು ಹೇಳಿ 'ನಿಂತಲ್ಲಿ ಮನೆವಾರ್ತೆ ಹೇಳುವವಳು' ಮದ್ದಿಕ್ಕಿ ಜನರನ್ನು ಕೆಡಿಸುವವಳು. ಸುದ್ದಿಗೆ ಕಿವಿಗೊಟ್ಟು ಹೋಗುವವಳು. ಗುಟ್ಟಾಗಿ ಸಂಸಾರ ಮಾಡದವಳು ಹೊಲತಿ' ಎಂದು ಸಾರಿದರು.

ಇದರಿಂದ ಜನ್ಮತಃ ಕುಲಜರೆಂದೆನಿಸಿಕೊಂಡು ಉಬ್ಬುತ್ತಿರುವವರು ಆತ್ಮ ಪರಿಶೋಧನೆ ಮಾಡಿಕೊಳ್ಳುವಂತಾಯಿತು; ನಿಜವಾದ ಅರ್ಥದಲ್ಲಿ ಒಳ್ಳೆಯ ಕುಲದವರಾಗಲು ಪ್ರಯತ್ನಿಸಬೇಕಾಯಿತು.

ಹೀನ ಕುಲದವನು ತನಗಾಗುತ್ತಿರುವ ಅಪಮಾನದಿಂದಾಗಿ ತಲೆತಗ್ಗಿಸಿ ಉದಾಸೀನವಾಗಿ ಕುಳಿತಿರುವುದನ್ನು ಕಂಡು, 'ನೀನು ಸದ್ಗುಣ, ಸುಜ್ಞಾನ ಹಾಗು ಹೃದಯ ಪರಿಶುದ್ಧಿ ಪಡೆದುಕೊಂಡರೆ ಕುಲಜನಿಗಿಂತ ಕಡಿಮೆಯೇನಿಲ್ಲ' ಎಂದು ಹೇಳಿ ಧೈರ್ಯ ತುಂಬಿ ಅವನಲ್ಲಿ ಆತ್ಮಗೌರವವನ್ನುಂಟು ಮಾಡಿದರು. ಜನ್ಮತಃ ಕುಲಜನೆಂದು ಅಹಂಕಾರಪಡುವ ವ್ಯಕ್ತಿಯು ನೀಚತನವನ್ನು ತೋರಿಸಿಕೊಟ್ಟು 'ನೀನು ಹೊಲೆಯ'ನೆಂದು ಖಂಡತುಂಡವಾಗಿ ಹೇಳಿದರು. ಹುಟ್ಟಿನಿಂದ ಬಂದ ಬಾಹ್ಯಹೊಲೆತನವು ನಿಜವಾದ ಹೊಲೆತನವಾಗಿರದೆ ನೀಚತನದಿಂದ ಬಂದ ಹೊಲೆತನವೇ ನಿಜವಾದ ಹೊಲೆತನವೆಂದು ದಾಸರು ಸಾರಿದರು. ಆಂತರಿಕ ಪವಿತ್ರತೆಯನ್ನು ಉಚ್ಚ ಹಾಗು ನೀಚ ಕುಲದವರಲ್ಲಿ ಉಂಟುಮಾಡಿ, ಯಾರೂ ಕೀಳಿಲ್ಲವೆಂದು ಹೇಳಿ, ಮೇಲು ಕೀಳುಗಳಿಂದ ಮುಕ್ತವಾದ ಸುವ್ಯವಸ್ಥಿತ ಸಮಾಜದ ನಿರ್ಮಾಣಕ್ಕೂ ದಾಸರು ಅತ್ಯಮೂಲ್ಯ ಸೇವೆಯನ್ನು ಸಲ್ಲಿಸಿದರು. ಈ ಪ್ರಸಂಗದಲ್ಲಿ ಶ್ರೀ ಎಂ. ವಿ. ಕೃಷ್ಣರಾವ್ ಮತ್ತು ಶ್ರೀ ಎಂ. ಕೇಶವಭಟ್ಟ ಅವರ ಮಾತುಗಳನ್ನು ಸ್ಮರಿಸುವುದು ಯೋಗ್ಯ. ಅವರು "ಶಿವಶರಣರಲ್ಲಿ ಜಾತಿ ಪಂಥ ಭೇದವಿರಲಿಲ್ಲವಷ್ಟೆ. ಅದರಂತೆ ದಾಸವರೇಣ್ಯರಾದರೂ ಯಾವ ಒಂದು ಜಾತಿಗೆ ಸೇರಿದವರಲ್ಲ. ಹರಿ

ದಾಸರು ಜಾತ್ಯಾತೀತರಾಗಿದ್ದು ಹಿಂದೂ ಧರ್ಮದ ಒಳಗವಲು ಗಳ ನಾನಾ ಆಚಾರ ವಿಧಿಗಳ ಬಗೆಗೆ ಸಮಾನಭಾವದಿಂದ ಇದ್ದರು...... ಲೋಕ ಜೀವನದಲ್ಲಿ ಹಲವಾರು ಬೇಧಭಾವ ಗಳಿವೆ. ಇವುಗಳೆಲ್ಲ ಮನುಷ್ಯ ನಿರ್ಮಿತವೇ ಹೊರತು ದೈವ ನಿರ್ಮಿತವಲ್ಲ. ಈ ಅನಂತಾನಂತ ಭೇದಗಳಲ್ಲಿ ಜಾತಿಭೇದ ವೊಂದು ಕುಲ ಜಾತಿಗಳ ನಿರ್ಣಯದಿಂದ ಫಲವೇನು ? ಸತ್ಯ ಸಂಧರಿಗೆ ಜ್ಞಾನ ಸಂಪನ್ನರಿಗೆ ಯಾವ ಕುಲವಾದರೇನು? ಯಾವ ಜಾತಿಯಾದರೇನು ?...... ಬಸವೇಶ್ವರಾದಿ ವಚನಕಾರರಂತೆ ಪುರಂದರದಾಸ. ಕನಕದಾಸರೂ ಸಹ ಜಾತಿಕಲ್ಪನೆಯನ್ನು ಮತ ಪ್ರಕ್ರಿಯೆ ವಿಧಿ ನಿಷೇಧಗಳನ್ನು ನಿರಾಕರಿಸಿದವರಾಗಿದ್ದರು" ಎಂದ ಮಾತುಗಳು ಜಾತಿಮತಗಳ ಬಗ್ಗೆ ದಾಸರ ನಿಲುವು ಏನಿದ್ದಿತು ಎಂಬುದನ್ನು ಸ್ಪಷ್ಟಪಡಿಸುತ್ತವೆ.

## ೧೨. ದಾಸರು ಕಾಣಬಯಸಿದ ಉತ್ತಮ ಕುಟುಂಬ

ಕುಟುಂಬಗಳು ಸುಧಾರಿಸದೆ ಸಮಾಜ ಉತ್ತಮವಾಗದು. ಉತ್ತಮ ಕುಟುಂಬಗಳಲ್ಲಿ ವ್ಯಕ್ತಿಗಳು ಉತ್ತಮರಾಗಿ ಬೆಳೆಯು ತ್ತಾರೆ. ಉತ್ತಮ ವ್ಯಕ್ತಿಗಳಿಂದ ಉತ್ತಮ ಸಮಾಜ ನಿರ್ಮಾಣ ವಾಗುತ್ತದೆ. ಆದ್ದರಿಂದ ಸಮಾಜವು ತನ್ನ ಉತ್ತಮಿಕೆಗಾಗಿ ಉತ್ತಮ ವ್ಯಕ್ತಿಗಳನ್ನು ಅವಲಂಬಿಸಿದಂತೆ, ಒಂದು ರೀತಿಯಲ್ಲಿ, ಉತ್ತಮ ಕುಟುಂಬಗಳನ್ನೂ ಅವಲಂಬಿಸಬೇಕಾಗುತ್ತದೆ. ಏಕೆಂದರೆ ವ್ಯಕ್ತಿಯ ವ್ಯಕ್ತಿತ್ವ ರೂಪಗೊಳ್ಳುವಲ್ಲಿ ಕುಟುಂಬ ವಹಿಸುವ

ಪಾತ್ರವು ಅತ್ಯಂತ ಮಹತ್ವದ್ದಾಗಿದೆ. ಅಲ್ಲಿ ಆತ ನಿರ್ದಿಷ್ಟ ಜನರ ನಿಕಟ ಸಂಪರ್ಕವನ್ನು ಹೆಚ್ಚಾಗಿ ಹೊಂದಿರುತ್ತಾನೆ. ಈ ಸಂಪರ್ಕದಿಂದ ವ್ಯಕ್ತಿಯ ಮನಸ್ಸಿನ ಮೇಲೆ ಗಾಢವಾದ ಸಂಸ್ಕಾರ ಗಳು ಉಂಟಾಗುತ್ತವೆ. ಉತ್ತಮ ಸಂಸ್ಕಾರಗಳಿಲ್ಲದ ವ್ಯಕ್ತಿ ಉತ್ತಮ ಸಾಮಾಜಿಕನಾಗಲಾರ. ಪ್ರಾಯಃ ಇದನ್ನು ದೃಷ್ಟಿ ಯಲ್ಲಿಟ್ಟುಕೊಂಡು ದಾಸರು ತಮ್ಮ ಗಮನವನ್ನು ಕುಟುಂಬದ ಸದಸ್ಯರನ್ನು ತಿದ್ದುವ ಕಡೆಗೂ ಹೊರಳಿಸಿದರು.

ಈ ದೇಶದ ಯಾವುದೇ ಕುಟುಂಬದಲ್ಲಾಗಲಿ ತಂದೆ-ತಾಯಿ ಗಳಿಗೆ ಪೂಜ್ಯಸ್ಥಾನವಿರುವುದನ್ನು ಕಾಣುತ್ತೇವೆ. ಧರ್ಮ ಅವರನ್ನು ದೇವರೆಂದು ಭಾವಿಸಲು ಬೋಧಿಸಿತು. ಆದುದ ರಿಂದ 'ಮಾತಾಪಿತರನು ಪೊರೆಯದ ಮಕ್ಕಳೇಕೆ' ಮಾತಾಪಿತರನು ಬಳಲಿಸುವ ಮಗ ಯಾತ್ರೆಯ ಮಾಡಿದರೇನು ?' ಎಂದು ಪುರಂದರದಾಸರು ಕೇಳಿದರು. 'ಪಿತಮಾತಾ ಗುರುಗಳ ಬಯ್ಯು ವವನೆ ಹೊಲೆಯ'ನೆಂದು ವಿಜಯದಾಸರು ಸಾರಿದರು. ಕನಕ ದಾಸರಂತೂ 'ಹೆತ್ತ ತಾಯಿಗಿಂತ ಅತ್ಯಧಿಕ ಮಾಯೆಯುಂಟೆ' ಎಂದು ಕೇಳಿದರು. ಹೀಗೆ ದಾಸರು ಮಕ್ಕಳೆನಿಸಿಕೊಳ್ಳುವವರಿಗೆ ತಮ್ಮ ತಂದೆತಾಯಿಗಳನ್ನು ಗೌರವದೃಷ್ಟಿಯಿಂದ ಕಾಣಬೇಕೆಂಬು ದನ್ನು ಬೋಧಿಸಿದರು. ಮಗನಂತೆ ಸೊಸೆಯಾದವಳೂ ಮನೆ ತನದ ಹಿತಕ್ಕಾಗಿ ಸರಿಯಾಗಿ ನಡೆದುಕೊಳ್ಳಬೇಕಾದುದು ಅತ್ಯಾ ವಶ್ಯಕವಾಗಿದೆ. ಪುರಂದರದಾಸರು ' ಮಾತು ಕೇಳದ ಸೊಸೆಯ ಗೊಡವೆ ತಾನೇಕೆ' ಹೇಳಿ ಅಂಥವಳನ್ನು ಉಪೇಕ್ಷಿಸಿದರು. ಸತಿ ಯಾದವಳನ್ನು ಕುರಿತು ಅವರು ಪತಿಯ ನಿಂದಿಸಿ ಬೊಗಳುವ

ಸತಿಯುಳು ವ್ರತಗಳ ಮಾಡಿದರೇನು ಫಲ' ಎಂದು ಕೇಳಿ ವ್ರತಗಳು ಪ್ರಯೋಜನಕಾರಿಯಾಗಬೇಕಾದರೆ ಪತಿಯೊಡನೆಯೋಗ್ಯ ರೀತಿಯಲ್ಲಿ ನಡೆದುಕೊಳ್ಳುವುದು ಅವಶ್ಯಕವೆಂಬುದನ್ನು ಪರೋಕ್ಷವಾಗಿ ಹೇಳಿದರು. ಹೀಗೆ ನಡೆದುಕೊಂಡಲ್ಲಿ ಸತಿಪತಿಯರಲ್ಲಿ ಸಾಮರಸ್ಯ ಉಂಟಾಗುತ್ತದೆ. ಹೀಗೆ 'ದಂಪತಿಗಳು ಏಕವಾಗಿಪ್ಪುದೇ ಹಬ್ಬ' (ವಿಜಯದಾಸರು) ಎನಿಸುತ್ತದೆ. ಗಂಡನೆನಿಸಿಕೊಳ್ಳುವವನನ್ನು ದಾಸರು ಉಪೇಕ್ಷಿಸಲಿಲ್ಲ. ಅವನಿಗೂ ಹೇಳಬೇಕಾದ ಮಾತುಗಳನ್ನು ಹೇಳಿದರು. 'ಒಂಟಿಯಲಿ ಹೆಂಡತಿಯ ಬಿಡುವಾತನಾಗಲಿ ಮುಪ್ಪಿನಲಿ ಮದುವೆ ಮಾಡಿಕೊಂಬುವನಾಗಲಿ ಮೂರ್ಖನೆನಿಸಿಕೊಳ್ಳುತ್ತಾನೆಂದು ಪುರಂದರದಾಸರು ಹೇಳಿದರು. ಇವನು ಅತ್ತೆಯ ಮನೆಯ ಸೇರುವುದನ್ನು ಯಾರೂ ಮೆಚ್ಚಲಿಲ್ಲ. ಅದಕ್ಕಿಂತಲೂ ಅಪಮಾನಕರವಾದುದು ಬೇರೊಂದಿಲ್ಲವೆಂದು ದಾಸರು ಭಾವಿಸಿದ್ದರು. 'ಅತ್ತೆಯ ಮನೆಯ ಸೇರುವವಗೆ ಅಭಿಮಾನವುಂಟೆ' ಎಂದು ಕನಕದಾಸರು ಕೇಳಿರುವುದನ್ನು ಇಲ್ಲಿ ನಾವು ಸ್ಮರಿಸಬಹುದು.

## ೧೩. ದಾಸರ ದೃಷ್ಟಿಯಲ್ಲಿ ಸ್ತ್ರೀಯರು

ಹೆಣ್ಣು ಕುಟುಂಬದ ಆಧಾರಸ್ತಂಭ. ಕುಟುಂಬದ ಮಾನಾಪಮಾನ ಹಾಗು ಸುಖದುಃಖ ಹೆಚ್ಚಾಗಿ ಅವಳನ್ನವಲಂಬಿಸಿವೆ. ಅವಳು ತಾಯಿಯಾಗಿ, ಮಡದಿಯಾಗಿ, ಅತ್ತೆಯಾಗಿ, ಸೊಸೆಯಾಗಿ, ಮಗಳಾಗಿ, ಅತ್ತಿಗೆಯಾಗಿ ಇತರ ಹಲವಾರು ಸ್ಥಾನ

ಂದಿದವಳಾಗಿ ಕುಟುಂಬದಲ್ಲಿರುತ್ತಾಳೆ. ಅವಳು ಎಡವಿದರೆ ಟುಂಬದ ಭದ್ರಸೌಧದ ಅಡಿಪಾಯ ಸಡಿಲಿದಂತೆ. ಹೀಗೆ ಡಿಪಾಯ ಸಡಿಲಿದ ಕುಟುಂಬಗಳೇ ಅಧಿಕವಾಗಿದ್ದಲ್ಲಿ ಸಮಾಜ ಗೆ ಉತ್ತಮವಾಗಬಲ್ಲುದು ಕುಟುಂಬಕ್ಕೂ ಸಮಾಜಕ್ಕೂ ರ್ತಿ ತರುವ ಸ್ತ್ರೀಯರನ್ನು ಬಹುಶಃ ದಾಸರು ಶೋಧಿಸಿರ ಕು. ಅಂಥವರು ಸಿಗದಿರಲು ಅವರು ನಿರಾಶೆಗೊಂಡಿರಬೇಕು. ತಿಯಾದವಳು ಸಿಗುವುದು ಅಪರೂಪವೆಂದು ಅವರಿಗೆ ಎನಿಸಿರ ಕು. ಆದುದರಿಂದಲೋ ಏನೋ ಕನಕದಾಸರು.

ಪ್ರತಿವ್ರತೆಯರೆಂಬುವರು ಶತಸಹಸ್ರದಲೊಂದು ।
ಮಿತಿಮೀರಿಯಿರುವರ್ಕೆ ಇತರ ಜನರು ॥
ಮತಿಗೆ ಮನಸೋತು ಅನ್ಯಪುರುಷರ ಕೂಡಿ ।
ರತಿಯೊಳಗೆ ಸಿಲುಕಿರುವರು. ರಮ್ಯದೊಳಗಿಹರು ॥

ದು ಹೇಳಬೇಕಾಯಿತು. ಇಂಥ ಸ್ತ್ರೀಯರನ್ನು ನಂಬುವು ದರೂ ಹೇಗೆ? ಇಂಥವರನ್ನೇ ಕಂಡೋ ಏನೋ ಪುರಂದರ ಸರು.

ನಂಬಬೇಡಿ ನಾರಿಯರನು, ಹಂಬಲಹಾರೈಸಬೇಡಿ, ।
ಅಂಬುಜಾಕ್ಷಿಯರೊಲುಮೆ ಡಂಭಕವೆಂದು ತಿಳಿಯಿರೊ ।
ಧರಣಿ ಜನರು ಕೇಳಿ ಲೇಶಕರುಣವಿಲ್ಲ ನಾರಿಯರಿಗೆ ।

ದು ಅನಿವಾರ್ಯವಾಗಿ ಸಾರಿದರು. ಪುರುಷನನ್ನು ಕುರಿತು ಥ ಸ್ತ್ರೀಯರನ್ನು 'ನೀ ಬರಿದೆ ನಂಬಿ ಕೆಡಬೇಡ ಎಂದು ಎಚ್ಚರಿ ರು. ಅವರು ಹೀಗೆ ಹೇಳಲು ಕಾರಣವೇನೆಂದರೆ ಸ್ತ್ರೀಯರು

"ಭಂಡತನ ಮಾಡೋರು ತುಂಡುಮುಂಡೇರು ।
ಒಡೆತನ ಬರುವಾಗ ತನ್ನ ಪತಿಯನೆ ಕಂಡು ।
ಚೆಲುವ ಚೆನ್ನಿಗನೆಂದು ಪೊಗಳುವರು ।
ಬಡತನ ಬಂದ ಕಾಡುವೇಳೆಯಲಿ ।
ಮುದಿಯನ ಕೈಪಿಡಿದು ಕೆಟ್ಟೆನೆಂಬೋರೊ ಅಲ್ಲದೆ
ಕಾಮನೆಯ ಜಗಳವನು ಆ ಮನೆಗೆ ಪೇಳಿ ।
ಆ ಮನೆಯ ಜಗಳವನು ಈ ಮನೆಗೆ ತಂದು ।
ಅವರಿವರು ಹೊಡೆದಾಡಿ ಕಾಡುತಿಹವೇಳೆಯಲಿ ।
ಅರಿಯದಂತಿಹರು ಅಲ್ಪ ಮುಂಡೇರು ॥

ಆಗಿದ್ದರು. ದಾಸರು ಹೆಣ್ಣಿನ ದುರ್ನಡತೆಯನ್ನು ಸಮಗ್ರವಾಗಿ ಪರಿಶೀಲಿಸಿದಂತೆ ಕಾಣುತ್ತದೆ. ಅವರು ಒಂದೆಡೆ ಅವಳು ತನ್ನ ಪತಿಗೆ ದುರ್ಬೋಧೆ ಮಾಡುತ್ತಿರುವುದನ್ನೂ ವಿವರಿಸಿದ್ದಾರೆ. ಪತಿಗೆ ಅವಳು

ತಾಯ ಹೊರಡಿಸು ತಂದೆ ಮೊದಲೆದಾಯಾದ್ಯರ ।
ಮಾಯೆಯನು ಬಿಡು ನಿನಗೆ ಬೇಕಾದರೆ ।
ನ್ಯಾಯದಲಿ ಬೇರೆ ಮನೆಕಟ್ಟು............

ಎಂದು ಬೋಧಿಸುತ್ತಾಳೆ. ಈ ಮಾಯಗಾತಿಯ ತೊತ್ತನ್ನು ಹೆಡತಲೆಯಮೃತ್ಯು ಎಂದು ದಾಸರು ತೆಗಳಿದರು. ಇವಳನ್ನು ಅಂಕಿತದಲ್ಲಿ ಇಡದೆ ಹೋದರೆ ಇವಳಿಂದಾಗುವ ಅನಾಹುತಗಳು ಅಪರಿಮಿತವೆಂಬುದು ದಾಸರಿಗೆ ಮನದಟ್ಟಾಯಿತು. ಆದಕಾರಣ

"ಸುಜ್ಞೆಯಿಂದಾಳ ಬೇಕಣ್ಣ ಗಂಡನಾಜ್ಞೆಯ ಮೀರಿ
ನಡೆವ ಲಂಡಹೆಣ್ಣ ।

ಅತ್ತೆಮಾವಗಂಜದವಳ ತನ್ನ ಉತ್ತಮ ಪುರುಷನ
ಜರಿದು ನುಡಿವಳ ।
ಭಕ್ತರ ಕಂಡು ಬಂಧಿಪಳ ನಡುನೆತ್ತಿಯ ಚರ್ಮವ
ಕೆತ್ತಬೇಕವಳ।
ನಲ್ಲರ ಕಂಡು ನಗುವಳ ತನ್ನಬಲ್ಲಿದ ಗಂಡನ
ಬೈದು ಕರೆವಳ ।
ಮಲ್ಲರಂದದಿ ಹೋರುವವಳ ಹುಲ್ಲುಮುರಿದು ಜಿಹ್ವೆ
ಸೀಳಬೇಕವಳ ।

ಎಂದು ಹೇಳಿ ಅವಳನ್ನು ಹೇಗೆ ಆಳಬೇಕು ಹಾಗು ವಳನ್ನು ಹೇಗೆ ದಂಡಿಸಬೇಕೆಂಬುದನ್ನು ದಾಸರಿಗೆ ತಿಳಿಸುವುದು ನಿವಾರ್ಯವೆನಿಸಿತು. ಇಷ್ಟಕ್ಕೂ ಅವಳು ದಾರಿಗೆ ಬರದೇ ೋದರೆ

'ಎಂದೂ ಈ ಪರಿಯಲ್ಲಿರುವವಳ ಅಂದಮಾಡುವುದೇಕೆ ।
ಬಿಡಬೇಕಿನ್ನವಳ ಒಂದಿಷ್ಟು ಗುಣವಿಲ್ಲದವಳ
ಶ್ರೀ ಪುರಂದರ ವಿಠಲರಾಯಗಲ್ಲದವಳ' ।

ಎಂದು ಗತ್ಯಂತರವಿಲ್ಲದೆ ಹೇಳಬೇಕಾಯಿತು. ಗಂಡನ ಟ್ಟವರು ಅಥವಾ ಮದುವೆಯಾಗದ ಹೆಣ್ಣನ್ನು ಕುರಿತು ಾಸರು,

ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ
ಹಡೆದವಳ ಎದೆ ಕೊರಳ ಕುಯ್ವಂಥ ಚೂರಿ ।

ಆಗುತ್ತಾಳೆ ಎಂದು ಹೇಳಿ ಹೆಣ್ಣು ವಿವಾಹಿತಳಾಗಿ ತನ್ನ ಿಯ ರಕ್ಷಣೆಯಲ್ಲಿರುವುದು ಸೂಕ್ತವೆಂಬ ತಮ್ಮ ವಿಚಾರವನ್ನು ್ತಪಡಿಸಿದರು,

"ಧರಣಿ ಜನರು ಕೇಳಿ ಲೇಶಕರುಣವಿಲ್ಲ ನಾರಿಯರಿಗೆ
ಎರಳೆ ಕಂಗಳ ಹೆಂಗಳೊಲುಮೆ ಬರೆಹ ನೀರಿನ ಮೇಲೆ ।
ಸರಸ ಮುಖಿಯರಿರವ ನೀವು ಬರಿದೆ ನಂಬಿ ಕೆಡಲುಬೇಡಿ

ಎಂದು ಹೇಳಿದ ಪುರಂದರದಾಸರು ತಿದ್ದಿದಲ್ಲಿ ಸ್ತ್ರೀಯರು ಒಳ್ಳೆಯವರಾಗುತ್ತಾರೆ ಎಂಬ ವಿಶ್ವಾಸವನ್ನು ಕಳೆದುಕೊಂಡಿರಲಿಲ್ಲ. ಅದಕ್ಕಾಗಿ ಅವರ ಹೆಣ್ಣು ಹೇಗೆ ನಡೆದುಕೊಂಡರೆ ಒಳ್ಳೆಯವಳಾಗುತ್ತಾಳೆ ಎಂಬುದನ್ನು ವಿವರಿಸಿದರು.

'ಹೆಣ್ಣು ಹೇಗಿರ ಬೇಕೆಂದರೆ ।
ಹಣ್ಣಿನಂತೆ ಲಕ್ಷಣವಿರಬೇಕು ।
ಬಾಳೆಹಣ್ಣಿನ ರುಚಿಯಂತೆ ಗುಣವಿರಬೇಕು ।
ಒಡಲನು ಕಟ್ಟಿ ಒಬ್ಬರಿಗಿಡಬೇಕು ।
ಸುಡುಗಾಡಿಗಳ ಮಾತು ನೀ ಮರೆಯಲು ಬೇಕು ।
ನೋಡಿದರೆ ನೋಡಿಲ್ಲೆಂಬುದಿರಬೇಕು ।
ನಡೆ ಗುಣದಲಿ ಪಾರ್ವತಿ ಸಮವಿರಬೇಕು ।
ಗತಿಯು ತನಗೆ ಪ್ರಾಣ ಪತಿಯೆನಬೇಕು ।
ಪ್ರತಿ ಅರುಂಧತಿ ಈಕೆ ಎನಿಸಬೇಕು ।
ಯತಿ ಗುರುಹಿರಿಯರಿಗೆರಗಿ ಸುಖಿಸಬೇಕು ।
ಅತಿಶಯ ಸಮುದ್ರ ಗಾಂಭೀರ್ಯವಿರಬೇಕು ।
ಪರತತ್ವಭಾವವ ತಿಳಿದಿರಬೇಕು ।
ಹರಿ ಪರದೇವತೆಯಧೀನವಿರಬೇಕು ।
ವರಲಕ್ಷ್ಮಿಯಂದದಿ ದಯೆವಿರಬೇಕು ।

ಎಂದು ಉಪದೇಶಿಸುತ್ತ ಕೊನೆಯಲ್ಲಿ 'ಪುರಂದರ ವಿಠಲ ಮೆಚ್ಚಬೇಕು' ಎಂಬ ಮುತ್ತಿನಂಥ ಮಾತನ್ನು ಹೇಳಿದರು. ತಾನು ಹೇಗೆ ನಡೆದುಕೊಂಡಲ್ಲಿ ಪುರಂದರವಿಠಲನು ಮೆಚ್ಚುವನು ಎಂದು ಆಲೋಚಿಸಿ ನಡೆದುಕೊಂಡಿದ್ದಾದರೆ ಹೆಣ್ಣು ಪೂಜ್ಯಳಾಗದೇ ಇರಳು.

ಹೊತ್ತಾರೆಯೆದ್ದು ಪತಿಗೆ ನಮಸ್ಕರಿಸುವ, ಮೃತ್ತಿಕೆಯಿಂದ ಶೌಚಮಾಡುವ ಬತ್ತಲೆ ಕುಳಿತು ಮೈತೊಳೆಯದ ನಾದಿನಿ ಅತ್ತೆ ಮಾವನ ಬೈಯದ ; ಜಲಜಕ್ಕಿ: ಸಾಳಿಕಂಬಳಿ , ಜೋಳಿ ಬಕ್ಕಿ ಗೊಂದಲಿ ಮೊದಲಾದವು ದೈವವೆಂದು ತಿಳಿಯದ; ಒಲವ ಔಷಧಮಾಡಿ ಪತಿಯ ಒಲಿಸದ; ಮಲಮಕ್ಕಳೊಳು ಮತ್ಸರಿಸದ; ಕಳುವಿನಲಿ ಕಾಂತನ ಧನವ ವಂಚಿಸದ; ಬಾಲಕರನು ತೊಟ್ಟಿಲೊಳಗಿಟ್ಟು ತೂಗುತ, ಪಾಲೆರೆವುತ, ಬೀಸುತ, ಕುಟ್ಟುತ, ಆಲಯದೊಳು ಕೆಲಸಗಳ ಮಾಡುತ ಲಕ್ಷ್ಮೀಲೋಲನ ಗುಣವ ಪಾಡುವ; ಅರಿಸಿಣ ಕುಂಕುಮ ಪುಷ್ಪಾಂಜನ ವಸ್ತ್ರಾಭರಣ ಭೂಷಿತೆಯಾಗಿ ಪತಿಯೊಡನೆ ಸರಸವಾಡುತ ಸುಖವ ಹರಿಗೆ ಸಮರ್ಪಿಸಿ ಹರುಷಬಡುವ ನಾರಿಯರನ್ನು ದಾಸರು ಮೆಚ್ಚದೆ ಇರುತ್ತಾರೆಯೇ ? ಇವರು ದಾಸರ ಪಾಲಿಗೆ ಪೂಜ್ಯರು.

ಅಗಣಿತ ಮಹಿಮ ಶ್ರೀ ಜಗನ್ನಾಥ ವಿಠಲನ ।
ಹಗಲು ಇರುಳು ಬಗೆ ಬಗೆಯಿಂದಲಿ ।
ಪೊಗಳುವ ದಾಸರ ಬಗೆಯುವರಾದಂಥ ।
ಸುಗುಣೆಯರಿದ್ದೆಡೆಗೆ ಕೈಮುಗಿದುಬನ್ನಿರೋ ।

ಎಂದು ಹೇಳಿದ ದಾಸರ ಮಾತುಗಳು ಒಳ್ಳೆಯ ಸ್ತ್ರೀಯರ ಬಗ್ಗೆ ದಾಸರಿಗಿರುವ ಪೂಜ್ಯಭಾವನೆಯನ್ನು ವ್ಯಕ್ತಪಡಿಸುತ್ತವೆ.

ಮೇಲೆ ಉಕ್ತವಾದ ಲಕ್ಷಣವುಳ್ಳವಳು ದಾಸರ ದೃಷ್ಟಿಯಲ್ಲಿ ಆದರ್ಶ ಹಾಗು ಪೂಜ್ಯ ಸ್ತ್ರೀಯಾಗಿದ್ದಳು. ಇವುಗಳಲ್ಲಿ ಕೆಲವಾದರೂ ದೇಶಕಾಲವೆನ್ನದೆ ಎಲ್ಲ ಸ್ತ್ರೀಯರು ಅನುಸರಿಸತಕ್ಕವೇ. ಒಳ್ಳೆಯವಳು ಎನಿಸಿಕೊಳ್ಳುವ ಸ್ತ್ರೀಯಲ್ಲಿ ಇರತಕ್ಕವೇ. ಆದರೆ ಹಣೆಗೆ ಕುಂಕುಮ ಅರಿಷಿಣ ಹಚ್ಚದೆ ಹೊತ್ತಾರೆ ಎದ್ದು ಪತಿಗೆ ನಮಸ್ಕರಿಸದ ಸ್ತ್ರೀ ಏಕೆ ಒಳ್ಳೆಯವಳಾಗಬಾರದು? ಇವು ಕೇವಲ ಬಾಹ್ಯಲಕ್ಷಣಗಳಲ್ಲವೆ? ಹೃದಯದ ಶ್ರೀಮಂತಿಕೆಗೂ ಇವಕ್ಕೂ ಯಾವ ಸಂಬಂಧವಿದೆ? ಇವು ಕೇವಲ ನಡೆದುಬಂದ ಪದ್ಧತಿಗಳಲ್ಲವೆ? ಸ್ತ್ರೀಯರ ಘನತೆಗೂ ಇವಕ್ಕೂ ತಳಕು ಹಾಕುವುದು ಸೂಕ್ತವೆ? ಎಂಬ ಪ್ರಶ್ನೆಗಳು ಹುಟ್ಟಬಹುದು. ಇವಕ್ಕೆ ಕೊಡುವ ಸಮಾಧಾನವಿಷ್ಟೆ: ಸಾಮಾಜಿಕ ಜೀವನ ಸುರಳಿತವಾಗಿಸಾಗಲು ಸಮಾಜ ಕೆಲವು ನಿಯಮ, ಕಟ್ಟಳೆ ಹಾಗು ಪದ್ಧತಿಗಳನ್ನು ಹಾಕಿಕೊಂಡಿರುತ್ತದೆ. ಇವುಗಳಿಂದ ಸಾಮಾಜಿಕ ಜೀವನಕ್ಕೆ ಧಕ್ಕೆ ಉಂಟಾಗುವಂತಿದ್ದರೆ ಇವುಗಳನ್ನು ಮುರಿಯುವ ಅಥವಾ ಬದಲಾಯಿಸುವ ಪ್ರಶ್ನೆ ಏಳುತ್ತಿತ್ತು. ಏನಾಕಾರಣ ಇವುಗಳನ್ನು ಮುರಿಯುವುದು ಒಂದು ಬಗೆಯ ಸಾಮಾಜಿಕ ಅಪರಾಧ. 'ಕುಲ'ದ ಗತಿ ಇವುಗಳಿಗೆ ಒದಗಿದ್ದರೆ ಅದನ್ನು ತೆಗಳಿದಂತೆ ಇವುಗಳನ್ನು ದಾಸರು ತೆಗಳದೆ ಬಿಡುತ್ತಿರಲಿಲ್ಲ.

'ಎದ್ದಾರೆ ಪತಿಗೆ ನಮಸ್ಕರಿಸು' ಎನ್ನುವುದು 'ಸತಿ'ಯು ಕೀಳೆಂದು ಹೇಳಿದಂತಾಗಲಿಲ್ಲವೆ? 'ಎದ್ದಾರೆ ಸತಿಗೆ ನಮಸ್ಕರಿಸು'

ಎಂದು ಪತಿಗೆ ಏಕೆ ಹೇಳಬಾರದಾಗಿತ್ತು ? ಎಂದು ಸಮಾನತೆಯ ಪ್ರತಿಪಾದಕರು ಕೇಳಬಹುದು. ಆದರೆ ಇಬ್ಬರೂ ಸರಿಸಮಾನರಿದ್ದರೆ ಒಬ್ಬರನ್ನೊಬ್ಬರು ನಮಸ್ಕರಿಸುವ ಪ್ರಶ್ನೆಯೇ ಏಳುತ್ತಿರಲಿಲ್ಲ. ಅಲ್ಲದೆ ಇಬ್ಬರು ಯಜಮಾನರಿರುವ ಯಾವ ಕಾರ್ಯವೂ ಯಶಸ್ವಿಯಾಗಿಲ್ಲ. ಕಾರ್ಯ ನಿರಾತಂಕವಾಗಿ ಸಾಗಬೇಕಾದಲ್ಲಿ ಯಜಮಾನ್ಯ ಒಬ್ಬನ ಪಾಲಿಗೆ ಹೋಗಲೇಬೇಕು. ಸ್ತ್ರೀ ಪುರುಷರ ಲೋಪದೋಷ ಗುಣಾವಗುಣಗಳನ್ನು ಗಣನೆಗೆ ತೆಗೆದುಕೊಂಡು ಯಜಮಾನನಾಗಲು ಪುರುಷನೆ ಅರ್ಹನೆಂದು ಸಮಾಜ ಭಾವಿಸಿರಬೇಕು. ಆದುದರಿಂದ ಸತಿಯು ಪತಿಯ ಅನುಯಾಯಿ ಆಗಬೇಕಾಯಿತು. ಅಂದಿನ ಸಮಾಜ ಧರ್ಮದ ಅಧೀನವಾಗಿದ್ದಿತು. ಸಾಮಾಜಿಕ ನಿಯಮ ಕಟ್ಟಳೆಗಳು ಧಾರ್ಮಿಕ ವಿಧಿರೂಪದಲ್ಲಿರುವುದನ್ನು ಅಂದು ಯಾರೂ ಪ್ರಶ್ನಿಸಲಿಲ್ಲ. ಎಲ್ಲರೂ ಅವನ್ನು ಮನ್ನಿಸಿದರು. ಸಮಾಜದ ಭಾಷೆಯಲ್ಲಿ ಯಜಮಾನನೆನಿಸಿಕೊಳ್ಳುವ ಪತಿ ಧರ್ಮದ ಭಾಷೆಯಲ್ಲಿ ಪೂಜ್ಯ ದೇವನೂ ಎನಿಸಿಕೊಂಡನು. ಲೋಕ ಕಲ್ಯಾಣಕ್ಕಾಗಿ ಧರ್ಮವನ್ನು ಎತ್ತಿ ಹಿಡಿಯುತ್ತಿದ್ದ ದಾಸರು ಪೂಜ್ಯನೆನಿಸಿಕೊಳ್ಳುವ ಪತಿಯನ್ನು ನಮಸ್ಕರಿಸುವುದು ಒಳ್ಳೆ ಸತಿಯ ಲಕ್ಷಣವೆಂದು ಹೇಳಿದರು. ಈ ನಂಬಿಕೆಯುಳ್ಳ ಅನೇಕ ಸ್ತ್ರೀಯರು ಇಂದಿಗೂ ಪತಿಯನ್ನು ದೇವರೆಂದು ಭಾವಿಸುತ್ತಿರುವುದನ್ನು ಕಾಣುತ್ತೇವೆ. ಧರ್ಮಶಾಸ್ತ್ರವು ಸಾಮಾಜಿಕ ನಿಯಮ ಕಟ್ಟಳೆಗಳ ಇನ್ನೊಂದು ಸ್ವರೂಪ; ಜನರು ತಲೆಬಾಗಿ ಒಪ್ಪಿಕೊಳ್ಳುವಂಥ ಸ್ವರೂಪ.

ಇಂಥ ಉತ್ತಮ ನಿಯಮಗಳ ಉಲ್ಲಂಘನೆಯಿಂದ ಆತ್ಮೋದ್ಧಾರವಾಗುವಂತಿದ್ದರೆ ದಾಸರು ಖಂಡಿತವಾಗಿ ಅದನ್ನು ಪ್ರೋತ್ಸಾಹಿಸುತ್ತಿದ್ದರು. ವಿನಾಕಾರಣ ಅವುಗಳ ಗೋಜಿಗೆ ಹೋಗಿ ತಲೆಕೆಡಿಸಿಕೊಳ್ಳುವ ವ್ಯಕ್ತಿಗಳಲ್ಲ ದಾಸರು. ಹೀಗಿರುವಾಗ್ಗೆ ಅಂದಿನ ಸಾಮಾಜಿಕ ಆರೋಗ್ಯವನ್ನು ಕಾಪಾಡುತ್ತಿದ್ದ ಸಾಮಾಜಿಕ ಏರ್ಪಾಟನ್ನು ದಾಸರು ಪ್ರೋತ್ಸಾಹಿಸಿದ ಹಾಗು ಬೆಂಬಲಿಸಿದ ಔಚಿತ್ಯವನ್ನು ಪ್ರಶ್ನಿಸುವುದು ಅನವಶ್ಯಕ ಮತ್ತು ಅನುಚಿತವೆಂದು ತೋರುತ್ತದೆ. ದಾಸರು ಒಳ್ಳೆಯ ಉದ್ದೇಶಕ್ಕಾಗಿ ಸಾಮಾಜಿಕ ಕಟ್ಟಳೆಗಳಿಗೆ ಕೊಡುತ್ತಿರುವ ಮಹತ್ವವನ್ನು ಹಾಗು ಅವುಗಳ ಬಗೆಗಿನ ಅವರ ಶ್ರದ್ಧೆಯನ್ನು ಗೌರವಿಸುವುದೊಂದೇ ನಮ್ಮ ಪಾಲಿನ ಕೆಲಸ.

## ೧೪. ದಾಸರ ದೃಷ್ಟಿಯಲ್ಲಿ ಅಯೋಗ್ಯಪತಿ

ಸಮಾಜವೇನೋ ಪತಿಯ ಸ್ಥಾನವನ್ನು ಹೆಚ್ಚಿಸಿತ್ತು. ಧರ್ಮದ ಮುದ್ರೆಯೂ ಅದಕ್ಕೆ ಬಿದ್ದೇ ಇತ್ತು. ಪತಿಯೆನಿಸಿಕೊಳ್ಳುವವನು ಈ ಒಂದು ಸ್ಥಾನಮಾನ ಹಾಗು ಅಧಿಕಾರ ಬಲದಿಂದ ಸತಿಯನ್ನು ಚೆನ್ನಾಗಿ ನಡೆಸಿಕೊಂಡು ಕುಟುಂಬ ಹಾಗು ಸಮಾಜದಲ್ಲಿ ಸುಸ್ಥಿತಿಯನ್ನುಂಟು ಮಾಡಬಹುದಾಗಿತ್ತು. ಆದರೆ ಕೆಲಜನ, ಪತಿಯೆನಿಸಿಕೊಳ್ಳುವವರು, ಹಾಗೆ ನಡೆದುಕೊಂಡಂತೆ

ಣುವುದಿಲ್ಲ. ತೋರಿಕೆಗೆ ಯಜಮಾನರಂತೆ ನಟಿಸಿದರೂ
ವರು ವಾಸ್ತವವಾಗಿ ಒಳಗಡೆ ಗುಲಾಮರಂತೆ ನಡೆದುಕೊಂಡು
ಮ್ಮ ಸತಿಯರ ಮೆಚ್ಚುಗೆ ಸಂಪಾದಿಸುವುದೇ ಮಹತ್ಸಾಧನೆ
ರೆಂದು ಬಗೆದಂತೆ ಕಂಡುಬರುತ್ತದೆ. ಇಂಥ ಹೇಡಿ ಹಾಗು
ಸಮರ್ಥ ವ್ಯಕ್ತಿಗಳನ್ನು ಕಂಡ ದಾಸರ ಹೃದಯನೊಂದಿರಬೇಕು.
ಷಯಾಸಕ್ತ ಹೇಡಿಪತಿ ತನ್ನ ಇಂದ್ರಿಯಗಳ ತೃಪ್ತಿಗಾಗಿ ಮಾಟ
ಾತಿ ಸತಿಯ ಇಚ್ಛಾನುವರ್ತಿಯಾಗುತ್ತಾನೆ. ಹೆಂಡತಿ ಇಚ್ಛೆಯ
ಂಥ ಹೇಡಿಯನ್ನು ದಾಸರು ಹೊಲೆಯನೆಂದು ಕರೆದರು.
ದು ಸಮಾಜದ ಬಗ್ಗೆ ದಾಸರಿಗಿರುವ ಕಳಕಳಿಯನ್ನು ಎತ್ತಿ
ೋರಿಸುತ್ತದೆ. ಈ ಹೊಲೆಯ ಪತಿಯು ತನ್ನ ಸತಿಯ
ಂತುಷ್ಟಿಗಾಗಿ ಅವಳ ತವರು ಮನೆಯಲ್ಲಿ ಹೋಗಿ ವಾಸಿಸಿದಲ್ಲಿ
ಶ್ಚರ್ಯ ಪಡಬೇಕಾಗಿಲ್ಲ. ಪತಿಯಾದವನ ಈ ಚರ್ಯೆಯನ್ನು
ಾಸರು ಮೆಚ್ಚಲಿಲ್ಲ; 'ಭಾವೆಯ ತಂದ ಮನೆಯಲಿ
ೀವಿಸುವುದಕ್ಕಿಂತ ಸಾವುದೇ ಮೇಲು ಅಭಿಮಾನಿಗಳಿಗೆ ಎಂದರು.
ಂಥವರು ಅಭಿಮಾನ ಶೂನ್ಯವಾದ ಕಾರಣ 'ಅತ್ತೆಮನೆ ಸೇರು
ಗೆ ಅಭಿಮಾನವುಂಟೆ' ಎಂದು ಕನಕದಾಸರು ಕೇಳಿದರು. ಬುದ್ಧಿ
ುದ್ಧವ ಹೀಗೆ ಮಾಡಲಾರನೆಂದು ತಿಳಿದ ಪುರಂದರದಾಸರು
ುಡದಿ ಹುಟ್ಟಿದ ಮನೆಯಲಿರುವವನು ಮೂರ್ಖನೆಂದು ಹೇಳಿ
ರು. ಮಡದಿಯ ತವರು ಮನೆಯನ್ನು ಸೇರಿದ ವ್ಯಕ್ತಿಗೆ
ೊದಲನೆಯ ದಿನ ಭವ್ಯವಾದ ಆದರಾತಿಥ್ಯ ಸಿಕ್ಕರೂ ಅದು
ಹಳ ದಿನ ಮುಂದುವರೆಯಲಾರದು. ಅದು ದಿನಂಪ್ರತಿ
ಿಮೆಯಾಗುತ್ತ ಹೋಗಿ ಉಪೇಕ್ಷೆಯಲ್ಲಿ ಪರ್ಯಾವಸಾನಗೊಳ್ಳು
ದೆ. ಇದನ್ನು ಸವಿಸ್ತಾರವಾಗಿ ವಿವರಿಸುತ್ತ ಪುರಂದರದಾಸರು
ೀಗೆಂದಿದ್ದಾರೆ.

"ಹೆಣ್ಣು ಕೊಟ್ಟತ್ತೆಮಾವಂದಿರ ಮನೆಯಲ್ಲಿ ಸೇರಿಯಿರುವರೆ
ಮನುಜ ।
ಬಂದ ಮೊದಲು ಇತ್ತ ಬನ್ನಿ ಕುಳ್ಳಿರೆಂದು
ಬಲು ಉಪಚರಿಸುವರು
ಅಂದಿನ ಮರುದಿನ ಬಂದ ಸ್ನೇಹಿತರನ್ನು
ಕಂಡಂತೆ ಕಾಣುವರೊ ।
ಬಂದ ಮೂರಲ್ಲಿ ಪರದೇಶಿಯು ಕಂಡಂತೆ
ಸಡ್ಡೆ ಮಾಡದೆ ಇಹರೊ ॥
ಮುದದಿಂದ ನಾಲ್ಕು ದಿವಸವು ಮಾನಭಂಗ ಮಾಡಿ
ಮಾತಾಡುವರೊ ।
ಐದನೆಯ ದಿನದಲ್ಲಿ ಆಕಳು ಬರಲಿಲ್ಲ
ಅರಸಿ ತರಬೇಕೆಂಬರೊ ।
ಇಂದೆಮ್ಮಗೆ ಕಲಗಚ್ಚನಿಕ್ಕದೆ ಎಲ್ಲಿ ಹೋದರೆಂಬರೊ ।
ಬೀದಿಯಲಿ ಕಸ ಬೆಟ್ಟದಂತೆ ಬಿದ್ದಿದೆ ಭೇದವೇ
ನಿಮಗೆಂಬರೊ ।
ಷಷ್ಠಿಯ ದಿನದಲಿ ಅಟ್ಟಡಿಗೆಯೆಲ್ಲ ಆರಿಹೋಯಿತು,
ನಿಮಗೆ ಆಳುವೆ ಎಂತೆಂಬರೊ ।
ಅಷ್ಟಮಿ ಶನಿಯಿಡು ಬಿಟ್ಟು ಹೋಗದು
ನಮಗೆ ಅಳವಿಲ್ಲ ಎಂತೆಂಬರೊ ।

ಹೀಗೆ ತಿಳಿಹೇಳಿ ಪುರುಷನಲ್ಲಿ ಅಭಿಮಾನ ತುಂಬಿ ಕೌಟುಂಬಿ... ಹಾಗು ಸಾಮಾಜಿಕ ಬಿರುಕನ್ನು ಮುಚ್ಚಲು ಯತ್ನಿಸಿದರು. ಅತ್... ಗೌರವ ಕಳೆದುಕೊಂಡ ವ್ಯಕ್ತಿ ಆತ್ಮೋದ್ಧಾರ ಮಾಡಿಕೊಳ್ಳಲಾ... ನೆಂದು ಬಗೆದ ದಾಸರು ಈ ಬಗೆಯ ಪ್ರಯತ್ನಕ್ಕೆ ಕೈ ಹಾಕಿ... ಬೇಕು.

## ೧೫. ದಾಸರು ಬೋಧಿಸಿದ ನಡವಳಿಕೆ

ವ್ಯಕ್ತಿಯೇ ಕುಟುಂಬ ಹಾಗು ಸಮಾಜದ ಘಟಕ. ವ್ಯಕ್ತಿ ಯನ್ನು ತಿದ್ದುವುದರಿಂದ ಸಮಾಜ ಹಾಗು ಕುಟುಂಬ ಇವುಗಳು ವಾಗಿಯೇ ಉತ್ತಮಗೊಳ್ಳುತ್ತವೆ ಎಂದು ದಾಸರು ಭಾವಿಸಿರ ೀಕು. ಆದಕಾರಣ ಅವರು ವ್ಯಕ್ತಿಯನ್ನು ತಿದ್ದುವ ಕಡೆ ತಮ್ಮ ಮನ ಹರಿಸಿದರು. "ವ್ಯಕ್ತಿ ವ್ಯಕ್ತಿಯಲ್ಲಿ ಸುಧಾರಣೆಯಾದುದೇ ದರೆ, ಒಟ್ಟಿನಲ್ಲಿ ಸಮಾಜವೇ ಸುಧಾರಣೆಯಾಗುತ್ತದೆ" (ಡಾ। . ವರದರಾಜರಾವ್) ಎಂದು ತಿಳಿದ ದಾಸರು ಇತ್ತಕಡೆ ಹೆಚ್ಚು ಕ್ಷ್ಯವನ್ನು ಹರಿಸಿದರು.

ವ್ಯಕ್ತಿಯು ತಾನು ಮಾಡಬೇಕಾದುದೇನು ? ಮಾಡ ಾರದುದೇನು ? ಎಂದು ತಿಳಿದು ನಡೆದರೆ ತಾನು ಉದ್ಧಾರ ಾಗುವನಲ್ಲದೆ ಇತರರೂ ಉದ್ಧಾರವಾಗುವ ಒಳ್ಳೆಯ ವಾತಾ ರಣದ ನಿರ್ಮಾಣಕ್ಕೂ ಕಾರಣನಾಗುತ್ತಾನೆ. ಆದುದರಿಂದ ಾಸರು ವ್ಯಕ್ತಿಯ ಕರ್ತವ್ಯಗಳನ್ನು ದೀರ್ಘವಾಗಿ ವಿವರಿಸಿದರು.

ಪರನಿಂದೆಯನ್ನು ಕುರಿತು ದಾಸರು "ಜರಿಯಬೇಡ ಹರಿಯ ರೆಯಬೇಡ" (ವಿಜಯದಾಸರು), 'ದಾಸರನ್ನು ನಿಂದಿಸಬೇಡ ನುಜ' (ಪುರಂದರದಾಸರು) 'ಪರನಿಂದೆಗಿಂತ ಪಾತಕವೆಂಬು ಂಟೆ ? (ಕನಕದಾಸರು) ಎಂದು ನುಡಿದರು. ಆದರೆ ಇತ

ರರು ತಮ್ಮನ್ನು ಬೈದರೆ ಆದರವೆಂದು ತಿಳಿದು ಹರುಷದಲಿರ ಬೇಕು (ವಿಜಯದಾಸರು) ಎಂಬ ಮುತ್ತಿನಂಥ ಮಾತುಗಳನ್ನು ಹೇಳದೈ ಇರಲಿಲ್ಲ.

ಸತ್ಸಂಗಕ್ಕೆ ಮಹತ್ವಕೊಟ್ಟ ದಾಸರು 'ಉತ್ತಮರ ಸಂಗ ದಿಂದ ಅಧಿಕ ಧರ್ಮವುಂಟೆ......ಸತ್ಯವಂತರ ಸಂಗವಿರಲು ತೀರ್ಥವೇತಕೆ (ಕನಕದಾಸರು).

ಹರಿದಾಸರ ಸಂಗಕ್ಕೆ ಸರಿಯುಂಟೆ ।
ದಾವಾನಲನ ತಪ್ಪಿಸಿ ಕಾಡಾನೆಯು ।
ದೇವಗಂಗೆಗೆ ತಂದು ಹೊಗಿಸಿದಂತೆ । (ವ್ಯಾಸರಾಯರು)
ಎಂದು ಅದರ ಮಹತ್ವವನ್ನೂ ಕೊಂಡಾಡಿದರು.

ದುಷ್ಟರೊಡನೆ ವ್ಯವಹರಿಸುವ ಪ್ರಸಂಗ ಉಂಟಾದಾಗ್ಗೆ ಅವರ ಮಟ್ಟಕ್ಕೆ ಇಳಿಯದೆ ಉತ್ತಮನಾದವನು ಘನತೆಗೆ ತಕ್ಕಂತೆ ವರ್ತಿಸಬೇಕೆಂದು ದಾಸರು ಬೋಧಿಸಿದರು. ಅವರು ವಿಷ ನಿಕ್ಕಿದವಗೆ ಷಡ್ರಸ ಉಣಿಸಬೇಕು, ದ್ವೇಷ ಮಾಡಿದವನ ಪೋಷಿಸ ಬೇಕು. ಹುಸಿಮಾಡಿ ಕೆಡಸುವವನ ಉಣಿಸಬೇಕು. ಮೋಸ ಮಾಡುವವನ ಹೆಸರು ಮಗನಿಗಿಡಬೇಕು' ಹೀಗೆ ನಡೆದುಕೊಂಡರೆ ಸಮಾಜದಲ್ಲಿ ತಾಂಡವವಾಡುವ ದ್ವೇಷ ಅಸೂಯೆಗಳು ಕಾಲ್ಕಿತ್ತು ತ್ತವೆ. ಇಂಥ ವ್ಯಕ್ತಿಯ ಸಂಪರ್ಕದಿಂದ ನೀಚರಾದವರಲ್ಲಿ ಪರಿ ವರ್ತನೆಯುಂಟಾಗಿ ಅವರೂ ಸಜ್ಜನರಾಗಲು ಪ್ರಯತ್ನಿಸುತ್ತಾರೆ.

ದುಷ್ಟರೊಡನೆ ಹೇಗೆ ವರ್ತಿಸಬೇಕೆಂದು ಹೇಳಿದ ದಾಸರು ಅವರ ಸಂಗವನ್ನೂ ನಿಷೇಧಿಸಿದರು.

ಮುಂದೆ ಭಲಾ ಎಂದು ಹಿಂದಾಡಿಕೊಂಬರ ಸಂಗಬೇಡ
ಕುಂದು ನಿಂದೆಗಳಪವಾದ ನೀಡುವರ ಪ್ರಸಂಗಬೇಡ ॥
ತುದಿನಾಲಿಗೆ ಬೆಲ್ಲ ಎದೆ ಕತ್ತರಿಯುವರ ಸಂಗಬೇಡ ।
ದಯೆಧರ್ಮ ದಾಕ್ಷಿಣ್ಯ ಅರಿಯದ ಮನುಜರ ಸಂಗಬೇಡ ।
ವಿನಯ ವಿವೇಕವಿಲ್ಲದ ವಿದ್ವಾಂಸರ ಸಂಗಬೇಡ ।......
ತನ್ನ ಕಾರ್ಯಕ್ಕಾಗಿ ಪರರ ಕೆಡಿಸುವರ ಸಂಗಬೇಡ"

ಎಂದರು ಸ್ತ್ರೀಯೊಡನೆ ನಡೆದು ಕೊಳ್ಳುವ ಬಗ್ಗೆ ದಾಸರು ಮೌನ ತಾಳಲಿಲ್ಲ.

'ಬೆರೆಯಬೇಡನ್ಯ ಸತಿಯರ ಸ್ವಪ್ನದಲಿ (ವಿಜಯದಾಸರು)
'ನೋಡದಿರು ಪರಸ್ತ್ರೀಯರ ನೋಡಿದರೆ ಕೆಡಹುದು'
ಅನ್ಯ ಸತಿಯರೊಲುಮೆಗೊಲಿದು ಅಧಮಗತಿಗೆಬೀಳಲೇಕೆ'
(ಪುರಂದರದಾಸರು)

ಎಂದು ಹೇಳಬೇಕಾದುದನ್ನೂ ಹೇಳಿದರು.

ಬಾಹ್ಯ ಶತ್ರುಗಳಿಂದ ಹೇಗೆ ರಕ್ಷಿಸಿಕೊಳ್ಳಬೇಕೆಂಬುದನ್ನು ಹೇಳಿಕೊಟ್ಟ ದಾಸರು ಆಂತರಿಕ ಶತ್ರುಗಳ ಬಗ್ಗೆ ಮೌನವಾಗಿರಲಿಲ್ಲ

ಆರು ವರ್ಗಗಳನಳಿಯಲು ಬೇಕು ।
ಮೂರು ಗುಣಂಗಳ ಮೀರಲು ಬೇಕು ।
ಅಷ್ಟಮದಂಗಳ ತುಳಿಯಲು ಬೇಕು ।
ದುಷ್ಟರ ಸಂಗವ ಬಿಡಲು ಬೇಕು ।
ವೇದಶಾಸ್ತ್ರವನೋದಲು ಬೇಕು ।
ಭೇದ ಅಹಂಕಾರವ ನೀಗಲು ಬೇಕು ।

ಶಾಂತಿಕ್ಷಮೆದಮೆ ಪಿಡಿಯಲು ಬೇಕು ।
ಭ್ರಾಂತಿ ಕ್ರೋಧವ ಕಳೆಯಲು ಬೇಕು ।
ಬಂದದ್ದುಂಡು ಸುಖಿಸಲು ಬೇಕು ।
ನಿಂದಾಸ್ತುತಿಗಳ ತಾಳಲು ಬೇಕು ।

ಎಂದು ಆಂತರಿಕ ಶತ್ರುಗಳಿಂದ ಪಾರಾಗಬೇಕೆಂಬುದನ್ನು ಒತ್ತಿ ಹೇಳಿದರು.

## ೧೬. ಧಾರ್ಮಿಕ ನೇಮ ನಿಷ್ಠೆಗಳ ಒಳನೋಟ

ಮನುಷ್ಯನ ನಡವಳಿಕೆಯನ್ನು ತಿದ್ದಿದ ದಾಸರು ಅವನಿಗೆ ಧಾರ್ಮಿಕ ನೇಮನಿಷ್ಠೆಗಳ ರಹಸ್ಯವನ್ನು ಭೇದಿಸುವ ತೀಕ್ಷ್ಣದೃಷ್ಟಿಯನ್ನೂ ನೀಡಿದರು. ಭ್ರಮೆ, ದುರಭಿಮಾನ ಹಾಗು ತಪ್ಪು ಗ್ರಹಿಕೆಗಳಿಂದಾಗಿ ವಿಕೃತ ಸ್ವರೂಪದಲ್ಲಿ ಕಾಣುವ, ಇವುಗಳ ನಿಜ ಸ್ವರೂಪವನ್ನು ತೋರಿಸಿಕೊಡುವುದು ದಾಸರಿಗೆ ಅವಶ್ಯಕವೆನಿಸಿತು. ಆದುದರಿಂದ ಗೋಮುಖದ ಆಚೆಯಿರುವ ವ್ಯಾಘ್ರವನ್ನು ಕಾಣುವ ದೃಷ್ಟಿಯನ್ನು ಅವನಿಗೆ ನೀಡಿದರು. ಬೆಳ್ಳಗೆ ಇದ್ದುದ್ದೆಲ್ಲಾ ಹಾಲಲ್ಲವೆಂದು ಹಾಗು ಕಪ್ಪು ಇದ್ದುದ್ದೆಲ್ಲಾ ಕೋಲಾಹಲವಲ್ಲವೆಂದು ತೋರಿಸಿಕೊಟ್ಟರು. ಇದರಿಂದ ವ್ಯಕ್ತಿ ನಿಜಸ್ವರೂಪವನ್ನು ಕಾಣಲು ಸಮರ್ಥನಾಗಿ ಹೊರಮೈಗೆ ನೀಡುತ್ತಿರುವ ಮಹತ್ವವನ್ನು ಒಳದಿರುಳಿಗೆ ಕೊಡುವಂತಾದನು.

ಮಡಿ, ಸ್ನಾನ, ಹಬ್ಬ, ಜಪ–ತಪ, ಉಪವಾಸ, ಪೂಜೆ, ತೀರ್ಥಕ್ಷೇತ್ರ ನರಕ–ಸ್ವರ್ಗ ಮುಂತಾದವುಗಳ ಬಗ್ಗೆ ಜನರು ಕಲ್ಪಿಸಿದ ಸ್ಥೂಲರೂಪದ ಪರದೆ ಸರಿಸಿ ಅದರ ಹಿಂದೆ ಇರುವ ನೈಜಸ್ವರೂಪವನ್ನು ತೋರಿಸಿಕೊಟ್ಟ ಕಾರಣ ವ್ಯಕ್ತಿಯ ದೃಷ್ಟಿಯಲ್ಲಿ ಮನೆಮಾಡಿಕೊಂಡ ಸ್ಥೂಲತೆ ಹಾಗು ಜಡತೆಗಳು ದೂರವಾಗಿ ಸೂಕ್ಷ್ಮತೆ ಹಾಗು ಸ್ಪಷ್ಟತೆಗಳು ಉಂಟಾದವು.

**ಮಡಿ, ಸ್ನಾನ** : ಮಡಿಯ ವಿಚಾರವನ್ನೆ ತೆಗೆದುಕೊಳ್ಳೋಣ ಸಾಮಾನ್ಯ ಜನರು ದೇಹತೊಳೆಯುವುದನ್ನೇ ಮಡಿಯೆಂದು ಭಾವಿಸುತ್ತಾರೆ. ಇದುವೆ ಮಡಿಯೆನಿಸಿಕೊಳ್ಳುವಂತಿದ್ದರೆ ಪುರಂದರದಾಸರು,

ಬಟ್ಟೆಯ ನೀರೊಳಗದ್ದಿ ಒಣಗಿಸಿ
ಉಟ್ಟುಕೊಂಡರೆ ಅದು ಮಡಿಯಲ್ಲ ।
..................................
ಇಚ್ಛೆಯಿಂದ ಮಲಮೂತ್ರ ಶರೀರವ
ನೆಚ್ಚಿ ತೊಳೆಯಲು ಅದು ಮಡಿಯೇ ।
ಎಂದು ಏಕೆ ಕೇಳುತ್ತಿದ್ದರು. ಅವರ ದೃಷ್ಟಿಯಲ್ಲಿ,
ಪೊಡವಿಪಾಲಕನ ಪಾದಧ್ಯಾನವನು
ಬಿಡದೆ ಮಾಡುವುದದು ಮಡಿಯು ।
ಹೊಟ್ಟೆಯೊಳಗಿನ ಕಾಮ ಕ್ರೋಧ ಮದಮತ್ಸರ ।
ಬಿಟ್ಟು ನಡೆದರೆ ಅದು ಮಡಿಯು ।
ಅಚ್ಯುತಾನಂತನ ನಾಮವ ನೆನೆದು
ಸಂಚಿ ಕಳೆವುದು ಅದು ಮಡಿಯು ।

ಆಗಿದೆ. ದಾಸರು ಆತ್ಮಶುದ್ಧಿಗೆ ಮಹತ್ವಕೊಟ್ಟರೇ ಹೊರತು ದೇಹಶುದ್ಧಿಗೆ ಕೊಡಲಿಲ್ಲ. ಆದುದರಿಂದ 'ಚರ್ಮವ ತೊಳೆದರೆ ಕರ್ಮವು ಹೋಗ್ವದೇ ?' ಎಂದು ಕೇಳಿದ ಬಾಹ್ಯಮಡಿ ಮಾಡುವವನನ್ನು ಕುರಿತು 'ಸುಡಲಿ ನಿನ್ನ ಮಡಿ' ಎಂದು ಬೇಸತ್ತು ಪುರಂದರದಾಸರು ನುಡಿದರು.

ಮಡಿ ಮಡಿಯೆಂದು ಮೂರ್ಮಾರು ಹಾರುತಿ ।
ಮಡಿಯೆಲ್ಲಿ ಬಂತು ಬಿಕನಾಸಿ ।
..............................
ನೆಲೆಗೊಂಡ ನವದ್ವಾರದ ಹೊಲೆಯೊಳು ।
ನರಳುತ ನೀ ಬಿದ್ದೆ ಬಿಕನಾಸಿ
ಹುಟ್ಟುತ ಸೂತಕ ಸಾಯಲು ಸೂತಕ ।
ನಟ್ಟನಡುವೆಲ್ಲಿ ಬಂತು ಬಿಕನಾಸಿ
ಪಟ್ಟ ಕಾವೇರಿಲಿ ಮುಳುಗಲು ನಿನ್ನ ।
ಮುಟ್ಟು ಹೋಗುವುದೆ ಬಿಕನಾಸಿ ।

ಎಂದು ಕೇಳಿ ಚರ್ಮವ ತೊಳೆಯುವುದರಿಂದ ಮಡಿ ಮಾಡಿದಂತಾಗುವುದಿಲ್ಲವೆಂಬುದನ್ನು ಸ್ಪಷ್ಟಪಡಿಸಿರಲು ಇದೆ, ಬಗೆಯ ವಿಚಾರವನ್ನು ವ್ಯಕ್ತಪಡಿಸುತ್ತ ಗೋಪಾಲದಾಸರು,

ಸ್ನಾನ ಮಾಡಿ ನಾಮ ಬಡಿದು ।
ಮುದ್ರೆಯ ಹಚ್ಚಿ ಜಡದೇಹ ತೊಳೆದು ।
ಅಡಿಗಡಿಗೆ ಕಾಮಕ್ರೋಧ ಒಡಲೊಳು ಮಲಮೂತ್ರ ।
ರುಧಿತ ರಕ್ತಮಾಂಸ ಕಡು ಘೋರ ಇಂದ್ರಿಯಗಳ ।
ಕೊಡದೊಳು ಮದ್ಯ ತುಂಬಿ ಮುಡಿಗೆ ಪೂಮಾಲೆ ಸುತ್ತ ।

ಕಡುಪರಿಮಳ ದ್ರವ್ಯ ಶ್ರೀಗಂಧ ಲೇಪಿಸಿ
ನಡುಬೀದಿಯೊಳಗಿಟ್ಟು ಬೆಡಗು ತೋರಿಸಿನ್ನು ।
ಮಡಿಮಾಡಿದರದು ಮಡಿಯಾಗಬಲ್ಲದೆ ? ।

ಎಂದು ನುಡಿದರು. ಹಾಗಾದರೆ ಏನುಮಾಡಿದವ ಮಡಿವಂತನೆನಿಸುತ್ತಾನೆ ಎಂಬುದಕ್ಕೆ ಅವರು,

ಕಂಡೆಡೆಯಲ್ಲಿ ವ್ಯಾಪ್ತನಾದ ಗೋಪಾಲವಿಠಲನೆಂದು ।
ದೃಢನುಡಿಯನೊಮ್ಮೆ ನುಡಿದು ಮಡಿಮಾಡಿದವ ।
ಮಡಿವಂತ ಮಡಿವಂತ ಮಡಿವಂತನೊ

ಎಂದು ಹೇಳಿದರು. ಈ ಮಾತುಗಳನ್ನು ಸಮರ್ಥಿಸುವ ರೀತಿಯಲ್ಲಿ ಜಗನ್ನಾಥದಾಸರು,

ಜಲ ಭೂತ ಜಲ ಜನರ ಮಡಿಮಾಡಲಾಯಿತೆ ।
ಜಲಧಿ ಮಂದಿರನ ಶುಭ ನಾಮ ।
ಶುಭನಾಮ ಮೈಲಿಗೆಯಕೆಡಿಸಿ ಮಂಗಳವ ಕೊಡದೇನೊ ?
ಓಡಿಹೋಗುವ ಮಡಿಯಮಾಡಿದಣಿಯಲು ಬೇಡ ।

ಎಂದು ಹೇಳಿದರು. ಹೃದಯ ಶುದ್ಧಿಗೆ ಮಹತ್ವಕೊಟ್ಟ ಮಹಿಪತಿರಾಯರು.

ಹೃದಯ ಶುದ್ಧವಾಗದೆ ಉದಯಸ್ನಾನವೇತಕೆ' ।

ಎಂದು ಕೇಳಿದರು. 'ಹೃದಯ ಶುದ್ಧಿಗಾಗಿ ಎಂಥ ಸ್ನಾನ ಮಾಡಬೇಕು' ಎಂಬುದಕ್ಕೆ ಪುರಂದರದಾಸರು 'ದಾನಧರ್ಮಗಳ ಮಾಡುವುದು, ಜ್ಞಾನತತ್ತ್ವಗಳ ತಿಳಿವುದು, ಹೀನಪಾಪಗಳ ಬಿಡುವುದು, ಧ್ಯಾನದಿಮಾಧವನೋಳ್ಪುದು, ಗುರುಹಿರಿಯರ ಪಾದ

ದರ್ಶಿಸುವುದು, ಹಿರಿಯರ ಸೇವೆಮಾಡುವುದು, ಕರೆದು ಅನ್ನ ವನಿಕ್ಕುವುದು, ದುಷ್ಟರ ಸಂಗವ ಬಿಡುವುದು, ಶಿಷ್ಟರ ಸಂಗದೊಳಿರುವುದು, ಪುರಂದರ ವಿಠಲನ ಮುಟ್ಟಿ ಭಜಿಸುವುದೇ ಸ್ನಾನವೆಂದು ಹೇಳಿದರು. ಅಜ್ಞರ ಕೈಯಲ್ಲಿ ಬಿದ್ದು ಒದ್ದಾಡುತ್ತಿರುವ ಮಡಿಯನ್ನು ದಾಸರು ಹೀಗೆ ಉದ್ಧಾರಮಾಡಿದರು.

ಅಪವಿತ್ರ: ಪವಿತ್ರೋವಾ । ಸರ್ವಾವಸ್ಥಾಂಗ ತೋಪಿವಾ।
ಯಃಸ್ಮರೇತ್ ಪುಂಡರೀಕಾಕ್ಷಂ । ಸಬಾಹ್ಯಾಂಭಂತರ

ಶುಚಿಃ । ಎಂಬ ಶ್ಲೋಕವನ್ನು ಸಂಧ್ಯಾವಂದನೆಯ ಕಾಲಕ್ಕೆ ಹೇಳುತ್ತಿರುವವರು 'ಅಪವಿತ್ರನಾಗಲಿ ಪವಿತ್ರನಾಗಲಿ ಸಕಲಾವಸ್ಥೆಯನ್ನು ಹೊಂದಿದವನಾಗಲಿ ಯಾವನು ಪುಂಡರೀಕಾಕ್ಷನನ್ನು ಸ್ಮರಿಸುವನೊ ಒಳಗೂ ಹೊರಗೂ ಶುಚಿರ್ಭೂತನಾಗುತ್ತಾನೆ' ಎಂಬ ಅದರ ಅರ್ಥವನ್ನು ಗಮನಿಸಿದಲ್ಲಿ ಮಡಿಯ ನಿಜವಾದ ಕಲ್ಪನೆಯುಂಟಾದೀತು.

**ಹಬ್ಬ:** ದೇವರ ಹೆಸರಿನಲ್ಲಿ ಅಭ್ಯಂಗ ಸ್ನಾನಮಾಡಿ ಮೃಷ್ಟಾನ್ನ ಭೋಜನವುಂಡು, ಹೊಸಬಟ್ಟೆಗಳನ್ನು ತೊಟ್ಟು ಸಂಭ್ರಮ ಪಡುವುದನ್ನೆ ಜನರು ಹಬ್ಬವೆಂದು ಭಾವಿಸಿದಂತೆ ತೋರುತ್ತದೆ. ಇವುಗಳಲ್ಲಿ ಔಪಚಾರಿಕ ಪೂಜೆ ಸೇರಿರುವುದನ್ನು ಮರೆಯಲಾಗದು. ಸಿಹಿತಿನಿಸು ಮಾಡದೆ ಹಬ್ಬ ಮಾಡಿದ್ದೇವೆ ಎಂದರೆ ಯಾರೂ ನಂಬದಷ್ಟು ಹಬ್ಬಗಳಿಗೂ ಸಿಹಿತಿನಿಸುಗಳಿಗೂ ತಳಕು ಬಿದ್ದಿದೆ. ಹೀಗೆ ಹಬ್ಬಗಳು ತುಟ್ಟಿಯಾಗಿ ಪರಿಣಮಿಸಿದ ಕಾರಣ ಅವು ಬಡವರಿಗೂ ಅನೇಕ ಮಧ್ಯಮವರ್ಗದ ಜನರಿಗೂ

ಹೊರೆಯಾಗಿ ಬಿಟ್ಟಿವೆ. ಅಂಥವರು ಸಮಾಜಕ್ಕೆ ಹೆದರಿಯೊ, ಶಿಷ್ಟಾಚಾರಕ್ಕೆ ಕಟ್ಟುಬಿದ್ದೋ, ದೇವರು ಕೋಪಗೊಳ್ಳುವನೆಂದು ಅಂಜಿಯೋ ಸಾಲಮಾಡಿಯಾದರೂ ಹಬ್ಬವನ್ನಾಚರಿಸುತ್ತಾರೆ. ಅಂದು ವಿಶೇಷ ಅಡುಗೆಯಿರುವ ಕಾರಣ ಅದರ ಭಾರಹೊತ್ತ ಹೆಂಗಸರು ಸಿಡಿಮಿಡಿಗೊಳ್ಳುವುದನ್ನು ಅಲ್ಲಲ್ಲಿ ಕಾಣಬಹುದಾಗಿದೆ. ಇದು ಹಬ್ಬವೆ? ಅಥವಾ ಹಬ್ಬವೆಂದರೆ ಬೇರೆ ಏನಾದರು ಇದೆಯೋ? ವಿಜಯದಾಸರಂತೂ "ದಂಪತಿಗಳು ಏಕವಾಗಿಪ್ಪುದು, ಕಾಮಕ್ರೋಧಂಗಳ ಬಿಡುವುದು, ಬಂದ ಅತಿಥಿಗಳ ಪೂಜಿಸುವುದು, ಹಾಳುಹರಟೆ ಬಿಟ್ಟು ಹೊತ್ತು ಕಳೆವುದು, ನೇಮನಿಷ್ಠೆಗಳ ನಿತ್ಯಮಾಳ್ಪುದು, ಕಾಮನ ಉಪಹತಿಗೆ ಅಂಜುವುದು, ಕಾಮುಕ ಜನಂಗಳ ಬಿಡುತಪ್ಪುದು, ಸ್ವಾಮಿಭೃತ್ಯನ್ಯಾಯ ತಿಳಿವುದು ಮುಂತಾದವುಗಳನ್ನು ಹಬ್ಬವೆಂದು ಕರೆದರು. ಇದನ್ನು ಅವಲೋಕಿಸಿದಾಗ್ಗೆ ಆಂತರಿಕ ಪರಿಶುದ್ಧಿಯನ್ನು ಬೆಳೆಸಿಕೊಂಡು ಆತ್ಮೋನ್ನತಿಯನ್ನು ಹೊಂದುವ ಪ್ರಯತ್ನವನ್ನೇ ದಾಸರು ಹಬ್ಬವೆಂದು ಭಾವಿಸಿದಂತೆ ತೋರುತ್ತದೆ. ಹೀಗೆ ಹಬ್ಬವನ್ನಾಚರಿಸುವ ವ್ಯಕ್ತಿ ದೇವರ ಕೃಪೆಗೆ ಹೇಗೆ ಪಾತ್ರನಾಗಲಾರ?

ತೀರ್ಥಕ್ಷೇತ್ರ: ತೀರ್ಥಕ್ಷೇತ್ರಗಳಿಗೆ ಹೋಗಿ, ಅಲ್ಲಿಯ ಪವಿತ್ರ ಜಲದಲ್ಲಿ ಮಿಂದು, ದೇವರದರ್ಶನ ಪಡೆದು, ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಳ್ಳಲು ಪುಣ್ಯಾರ್ಥಿಗಳಾದ ಭಕ್ತರು ಹವಣಿಸುತ್ತಾರೆ. ಈ ಬಗೆಯ ಯಾತ್ರೆ ಪುಣ್ಯಪ್ರಾಪ್ತಿಗೆಅವಶ್ಯವೆ? ಇದನ್ನು ಕೈಕೊಳ್ಳದ ವ್ಯಕ್ತಿ ಮುಕ್ತಿಯಿಂದ ವಂಚಿತನಾಗುವನೆ? ಎಂಬ ಪ್ರಶ್ನೆಗಳು ಉದ್ಭವಿಸಬಹುದು. ದಾಸರು ಇದರ ಕಡೆಗೂ

ತಮ್ಮ ಗಮನಹರಿಸಿದರು. ಬೇರೆ ಬೇರೆ ಕ್ಷೇತ್ರಗಳಿಗೆ ಹೋಗಿ ಅಲ್ಲಿಯ ಮಂದಿರಗಳಲ್ಲಿ ಹರಿಯನ್ನು ನೋಡುವ ಬದಲು ಚಿತ್ತದಲ್ಲಿ ಆತನನ್ನು ನೋಡುವುದನ್ನು ದಾಸರು ಪ್ರೋತ್ಸಾಹಿಸಿದರು. ಗೋಪಾಲದಾಸರು.

ಎತ್ತ ಹೋದರೇನು ! ಎತ್ತ ನಿಂತರೇನು !!
ಚಿತ್ತಬಂದಂತೆ ಚಿಗಿದಾಡಿದರೇನು ।
ಚಿತ್ತದಲಿ ಹರಿಯು ಕಾಣುವ ಭಕ್ತಂಗೆ ।
ಮತ್ತೆ ಇತರ ಜನರ ಪರಿವೆಯೇನೊ ।

ಎಂದು ಕೇಳಿ ತೀರ್ಥಕ್ಷೇತ್ರಗಳಿಗಾಗಿ ಕೈಕೊಳ್ಳುವ ಯಾತ್ರೆ ಎಷ್ಟರಮಟ್ಟಿಗೆ ಪ್ರಯೋಜನಕಾರಿ ಎಂಬುದನ್ನು ತೋರಿಸಿ ಕೊಟ್ಟರು. ಇದೇ ಬಗೆಯ ವಿಚಾರ ವ್ಯಕ್ತಪಡಿಸುತ್ತ ಕನಕದಾಸರು,

ಕಾಶಿ, ವಾರಣಾಸಿ, ಕಂಚಿ, ಕಾಳಹಸ್ತಿ, ರಾಮೇಶ್ವರ ।
ಏಸು ದೇಶ ತಿರುಗಿದರೆ ಬಾಹುದೇನೊ, ಅಲ್ಲಿ ಆಹುದೇನೊ।

ಎಂದು ಕೇಳಿ,

ವಾಸುದೇವನೆಂಬ ಒಳಗಿದ್ದ ಹಂಸನ ಸೇರಿ ।
ಲೇಸನುಂಡು ಮೋಸಗೊಳದೆ ಮುಕ್ತನಾಗೊ
ನೀ ಶಕ್ತನಾಗೊ ।

ಎಂದು ತಿಳಿಹೇಳಿದರು. ಪುರಂದರ ದಾಸರಂತೂ ಈ ಕ್ಷೇತ್ರಗಳು ವ್ಯಕ್ತಿಯ ಹೊರಗೆ ಇರದೆ ಅವನ ಒಳಗಡೆ ಇವೆ ಎಂಬುದನ್ನು ಒತ್ತಿಹೇಳಿದರು.

ಹರಿಭಕುತಿ ಉಳ್ಳವರ ಶರೀರವೆ ಕುರುಕ್ಷೇತ್ರ ।
ಅವರು ನರರೆಂದು ಬಗೆವವರೆ ನರಕವಾಸಿಗಳು ।
ಪದುಮಲಿನ ನೆನೆಸುವ ಹೃದಯ ಕಾಶೀಪುರವು ।
ಮಧುವೈರಿ ನೆನೆವ ಮನ ಮಣಿಕರ್ಣಿಕೆ ।
ಪದುಮನಾಭನ ಪಾಡ್ವ ವದನವೆ ವೈಕುಂಠ ।

ಪುಣ್ಯ ಕ್ಷೇತ್ರಗಳಲ್ಲಿ ಸಿಗಬಹುದಾದ ಪವಿತ್ರತೆಯನ್ನು ಮನುಷ್ಯ ತನ್ನ ಹೃದಯದಲ್ಲಿ ನಿರ್ಮಿಸಿಕೊಳ್ಳಬೇಕೆಂಬುದು ದಾಸರ ಆಶಯವಾಗಿದೆ. ಅದಕ್ಕಾಗಿ ಬಾಹ್ಯದಲ್ಲಿ ಓಡಾಡುವ ಕಾರಣ ವಿಲ್ಲ. ಅಂಥವರನ್ನು ಕುರಿತು ದಾಸರು.

ಇತ್ತತ್ತ ಓಡಿ ನೀ ಗಾಸಿಪಡಲುಬೇಡ ।
ಎತ್ತೂ ಇಹನು ಕೃಷ್ಣನು ।
ಶುದ್ಧ ಮನದಿಂದ ಇದ್ದ ಎಡೆಯಲಿ ।
ಬುದ್ಧಿಯ ಅವನಲಿ ನಿಲ್ಲಿಸಬೇಕಯ್ಯ ।

ಎಂದು ಹೇಳಿದರು. ಓಡಾಡುವುದು ದೇವರ ಸರ್ವ ವ್ಯಾಪಕತ್ವದ ಬಗ್ಗೆ ಸಂಶಯ ಹೊಂದಿರುವುದನ್ನು ತೋರಿಸ ತ್ತದೆ. ದೇವರು ಎತ್ತೂ ಇಹನೆಂದು ನಂಬಿ ಶುದ್ಧಮನದಿಂದ ಬುದ್ಧಿಯನ್ನು ಅವನಲ್ಲಿ ನಿಲ್ಲಿಸುವುದೇ ನಿಜವಾದ ತೀರ್ಥಕ್ಷೇತ್ರ ಪರ್ಯಟನ. ಈ ಬಗೆಯ ಮಾನಸಿಕ ಸ್ಥಿತಿಲಭಿಸಬೇಕಾದರೆ ಸತ್ಸಂಗ ಅವಶ್ಯ. ಇದನ್ನರಿತ ಕನಕದಾಸರು "ಸತ್ಯವಂತರ ಸಂಗ ವಿರಲು ತೀರ್ಥವೇತಕೆ' ಎಂದು ಕೇಳಿದರು. ದೇವರನ್ನು ಒಳಗೆ ಕಾಣದವ ಅವನನ್ನು ಎಲ್ಲಿಯೂ ಕಾಣಲಾರ, ಒಳಗೆ ಕಂಡವನು ಅವನ ದರ್ಶನಕ್ಕಾಗಿ ಪರದಾಡುವುದಿಲ್ಲ, ಒಳಗೆ ಕಾಣಲಾಗದೆ

ಪರದಾಡುವುದು ನಿರರ್ಥಕ ಎಂದು ಹೇಳುವುದು ದಾಸರ ಉದ್ದೇಶ ವಿದ್ದಂತೆ ತೋರುತ್ತದೆ. ದಾಸರು ಬಾಹ್ಯ. ಜಡ ಹಾಗು ಭೌತಿಕ ಸ್ವರೂಪಕ್ಕೆ ಮಹತ್ವಕೊಡದೆ ಆಂತರಿಕ, ಸೂಕ್ಷ್ಮ ಹಾಗು ನಿಜ ಸ್ವರೂಪಕ್ಕೆ ಮಹತ್ವ ಕೊಡುತ್ತಿರುವುದನ್ನೂ ಇಲ್ಲಿ ಕಾಣಬಹುದು.

**ಪೂಜೆ :** ಪೂಜೆಯ ಬಗ್ಗೆ ಸ್ಪಷ್ಟವಾದ ತಿಳುವಳಿಕೆಯನ್ನು ದಾಸರು ಹೊಂದಿದ್ದರು. 'ಹರಿಯ ಪೂಜೆ ಮಾಡದವನ ಜನ್ಮ ವೇತಕೆ' ಎಂದು ಕೇಳಿದ ಕನಕದಾಸರು ಜನ್ಮವು ಸಾರ್ಥಕಗೊಳ್ಳ ಬೇಕಾದರೆ ಪೂಜೆ ಅತ್ಯವಶ್ಯವೆಂಬುದನ್ನು ಒತ್ತಿ ಹೇಳಿದರು. ಪ್ರತಿಯೊಬ್ಬ ವ್ಯಕ್ತಿ ಪೂಜೆಯನ್ನು ಮಾಡಲೇಬೇಕು. ಆದರೆ ಅದು ಫಲಪ್ರದವಾಗಬೇಕಾದರೆ ದೇವರ ಮೇಲೆ ಮನಸ್ಸು ನಿಲ್ಲಲ್ಲೇ ಬೇಕು. ಆದ್ದರಿಂದ ಪುರಂದರದಾಸರು,

ಪೂಜೆಯಾತಕೊ ಮನುಜ ।
ಪೂಜೆಯಲಿ ನಿನ್ನ ಮನ ನಿಂದಿದ್ದ ಮೇಲೆ ।

ಎಂದು ಕೇಳಿದರು. ಕಂಡದೇವತೆಗಳ ಪೂಜೆಯನ್ನಂತೂ ದಾಸರು ಮೆಚ್ಚಲೇ ಇಲ್ಲ. ಸ್ಪಷ್ಟವಾದ ಮಾತುಗಳಲ್ಲಿ ಅದನ್ನು ಖಂಡಿಸಿದರು. ಕನಕದಾಸರು,

ಹರಿಹರರ ಪೂಜೆಗಳು ಹಗರಣಗಳಾದವು ।
ಉರಿ ಮೋರೆ ಚಾಮುಂಡಿ ಶಕ್ತಿಗಳಿಗೆ ।
ಕುರಿಕೋಣ ನೈವೇದ್ಯ ಧೂಪದೀಪಗಳಿಂದ ।
ಪರಮ ಭಕ್ತಿಯ ಮಾಡಿಪೂಜಿಸುವರಯ್ಯ ।

ಎಂದು ನೊಂದು ಹೇಳಿದರು. ಈ ಬಗೆಯ ಪೂಜೆಯಿಂದ ಆ ದೇವತೆಗಳು ಸಂತುಷ್ಟರಾಗಬಹುದಾದರೂ ಅವರು ತಮ್ಮ

ಭಕ್ತರನ್ನು ಯಮದೂತರ ಸೆಳೆತದಿಂದ ರಕ್ಷಿಸಿಕೊಳ್ಳಲಾರರು. ಇದು ದಾಸರ ಈ ಕೆಳಗಿನ ಮಾತುಗಳಿಂದ ಸ್ಪಷ್ಟವಾಗುತ್ತದೆ.

ಎಕ್ಕನಾತ ಎಲ್ಲಮ್ಮ ಮಾರಿದುರ್ಗಿ ಚೌಡಿಯರ।
ಅಕ್ಕರೆಯಿಂದಲಿ ಪೂಜೆ ಮಾಡಲೇಕೆ ।
ಗಕ್ಕನೆ ಯಮನದೂತರು ಬಂದು ಬಿಡಿಸಿಕೊಳುವಾಗ ।
ಶಕ್ತಿಯರು ಬಿಡಿಸಿ ಕೊಂಬರೇನೊ ಮರುಳೆ ।
ಇಂತಹ ದೇವತೆಗಳಿಗೆ ಪ್ರಾಣಬಲಿಯನ್ನು ಕೊಡುವ ಜನರನ್ನು,
'ತೊಳದವರ ಮಾತುಕೇಳಿ ಖೂಳರೆಲ್ಲರು ಕೂಡಿಕೊಂಡು ।
ತಾಳುಮಾಡಿ ಕೈಯಲ್ಲಿದ್ದ ಹೊನ್ನು ಹಣಗಳ ।
ಬಾಳು ತಿಪ್ಪ ಕೋಣ ಕುರಿಯ ಎಳಬೀಳಕೊರಳು ಕೊಯಿದು ।
ಬೀಳಬೇಡಿ ನರಕಕೆಂದು ಹೇಳಬಂದೆನು ॥
ಎಂದು ಎಚ್ಚರಿಸಿದರು.

ಇಲ್ಲಿ ದಾಸರ ಮಾತಿನಲ್ಲಿ ನರಕದ ಉಲ್ಲೇಖ ಬಂದಕಾರಣ ಅವರ ಬಗ್ಗೆ ಅವರು ಹೊಂದಿದ್ದ ಕಲ್ಪನೆಯನ್ನು ಉಲ್ಲೇಖಿಸುವುದು ಅಪ್ರಾಸಂಗಿಕವೆನಿಸಲಾರದು.

"ನರಕ ಸ್ವರ್ಗಗಳೆಂಬವೆರಡು ಇಲ್ಲಿಹವು ।
ವಿಸ್ಮರಣೆಯೇ ನರಕ, ಸ್ಮೃತಿ ಸರ್ಗ ।
ಸ್ಮೃತಿ ಸ್ವರ್ಗವಿರೆ ಬಾಹ್ಯನರಕ ಭಯಕಂಜೆ ಎಂದೆಂದೂ ।

(ಜಗನ್ನಾಥದಾಸರು) ಪುರಾಣಗಳಲ್ಲಿ ಉಲ್ಲೇಖವಾಗಿರುವ ಬಾಹ್ಯ ಸ್ವರ್ಗನರಕಗಳಿಗಿಂತಲೂ ಈ ಬಗೆಯ ಸ್ವರ್ಗನರಕಗಳಿಗೆ ದಾಸರು ಮಹತ್ವ ಕೊಟ್ಟಿರುವುದನ್ನು ಕಂಡಾಗ್ಗೆ ಅವರಲ್ಲಿ ಜನರ ಅಭ್ಯುದಯದ ಬಗ್ಗೆ ಅಗಾಧವಾದ ಆಸಕ್ತಿಯಿತ್ತೆಂಬುದು ಗೊತ್ತಾಗುತ್ತದೆ.

ಜಪ–ತಪ: ಸ್ಥೂಲ ಹಾಗು ಸಾಂಪ್ರದಾಯಿಕ ಜಡಾರ್ಥ ದಿಂದ ಮುಕ್ತಗೊಂಡವುಗಳಲ್ಲಿ ಜಪ–ತಪಗಳೂ ಸೇರಿವೆ. ವಾದಿ ರಾಜರ ದೃಷ್ಟಿಯಲ್ಲಿ ಇತರ ಎಲ್ಲಾ ತಪಗಳಿಗಿಂತಲೂ ತಾಳು ವಿಕೆಯೇ ಶ್ರೇಷ್ಠತಪವಾಗಿದೆ. ಇಂಥ ತಪವನ್ನು ದುರ್ಬಲ ಹೃದಯದ ಭಕ್ತ ಆಚರಿಸಲಾರ. ಏಕೆಂದರೆ ಆವನು 'ದುಷ್ಟ ಜನರು ಪೇಳ್ವ ನಿಷ್ಠುರದ ನುಡಿಗಳನ್ನು, ಹಳಿದು ಹಂಗಿಸುವಂಥ ಹಗೆಯು ಮಾತುಗಳನ್ನು, ಸುಳಿನುಡಿ ಕುಹಕ ಕುಮಂತ್ರವನ್ನು, ಅಕ್ಕಸ ಮಾಡುವವನನ್ನು ಉಕ್ಕೋ ಹಾಲಿಗೆ ನೀರಿಕ್ಕುವಂದದಿ ತಾಳ ಬೇಕಾಗುತ್ತದೆ. ಕ್ರೋಧ, ಅಹಂಕಾರ, ಪ್ರತೀಕಾರ ಮುಂತಾದ ಭಾವಗಳಿಂದ ಮುಕ್ತನಾಗದ ವ್ಯಕ್ತಿ ಈ ಬಗೆಯ ತಪವನ್ನು ಆಚರಿ ಸಲು ಹೇಗೆ ಸಮರ್ಥನಾಗುತಾನೆ? ಇವುಗಳನ್ನು ಜಯಿಸಿ ತಾಳಬಲ್ಲವನೇ ನಿಜವಾದ ತಪಸ್ವಿ.

ಜಪ–ತಪಕ್ಕೆ ಹೃದಯ ಸಬಲವಾಗಿರುವಂತೆ ಪರಿಶುದ್ಧವು ಆಗಿರಬೇಕು. ಆದ್ದರಿಂದ ಕನಕದಾಸರು,

ಜಪವ ಮಾಡಿದರೇನು; ತಪವ ಮಾಡಿದರೇನು ।
ವಿಪರೀತ ಕಪಟಗುಣ ಕಲುಷವಿದ್ದವರು ॥
ಎಂದು ಕೇಳಿದರು.

ಇದಕ್ಕಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ ಪುರಂದರ ದಾಸರು "ಸತ್ಯವೆಂಬುದೇ ಉಪವಾಸ, ಜಪ. ನೇಮ"ವೆಂದು ಸಾರಿದರು. ಪಾತಕದಿಂದ ದೇವಾನುಗ್ರಹದೆಡೆಗೆ ಹೋಗುವ ಮಾನ ವನ ಪರಿಶುದ್ಧ ಅಂತರಂಗದ ಪ್ರಯತ್ನವನ್ನು ದಾಸರು ತಪ ವೆಂದು ಬಗೆದಂತೆ ತೋರುತ್ತದೆ.

## ೧೭. ನೀಚತನ ಮತ್ತು ಆದರ ಮೂಲ

ಋಜುವಾದುದೇನೆಂದು ತಿಳಿದ ಮನುಷ್ಯನೂ ಕೆಲವೊಮ್ಮೆ ದಾರಿ ತಪ್ಪುತ್ತಾನೆ. ಬಹುತೇಕ ಸಂದರ್ಭಗಳಲ್ಲಿ ಮನುಷ್ಯ ಪಥಭ್ರಷ್ಟನಾಗುವುದಕ್ಕೆ ಅವನ ಹೊಟ್ಟೆ ಕಾರಣವಾಗಿರುತ್ತದೆ. ಹೊಟ್ಟೆ ಹೊರೆಯಲು ಅವನು ಅನುಕೂಲಕರವಾದ ವೇಷ ಹಾಕುತ್ತಾನೆ. ದಾಸರ ವೇಷವೂ ಇಂಥ ವೇಷಗಳಲ್ಲಿ ಒಂದು. ಅಂದಿನ ಕಾಲದಲ್ಲಿ ಸಮಾಜ ದಾಸರಿಗೆ ಕೊಡುತ್ತಿರುವ ಗೌರವವನ್ನು ಕಂಡು ಮೋಸಗಾರರು ಜನರನ್ನು ಮೋಸಗೊಳಿಸಲು ಇದನ್ನು ಅನುಕೂಲಕರವಾದ ವೇಷವೆಂದು ಭಾವಿಸಿರಬೇಕು. ಈ ಬಗೆಯ ಮೋಸಗಾರರು ಹೆಚ್ಚಾದಾಗ್ಗೆ ಸಮಾಜಕ್ಕೆ ನಿಜವಾದ ದಾಸರನ್ನು ಗುರುತಿಸುವುದು ದುಸ್ತರವಾಗಿರಬೇಕು. ಅಥವಾ ಅದು ನಿಜವಾದ ದಾಸರನ್ನೂ ಸಂಶಯ ದೃಷ್ಟಿಯಿಂದ ನೋಡುತ್ತಿರಬೇಕು. ಇಂಥ ವಾತಾವರಣದಲ್ಲಿ ದಾಸರ ಸಮಾಜಸೇವೆಯು ನಿರೀಕ್ಷಿತ ಫಲವನ್ನು ಕೊಡದೆ ವ್ಯರ್ಥವಾಗಬಹುದು. ಆದ್ದರಿಂದ ಮೋಸಗಾರರ ಬಣ್ಣ ಬಯಲು ಮಾಡುವುದು ದಾಸರಿಗೆ ಅನಿವಾರ್ಯವೆನಿಸಿತು. ಈ ಬಗೆಯ ಕೆಲಸಕ್ಕೆ ಕೈಹಾಕಿದ ವ್ಯಾಸರಾಯರು.

“ದಾಸರೆಂದರೆ ಪುರಂದರ ದಾಸರಯ್ಯ ।
ವಾಸುದೇವ ಕೃಷ್ಣನ್ನ ಸೂಚಿಪೂಜಿಸುವ” ।

ಎಂದು ಹೇಳಿ, ನಕಲಿ ದಾಸರ ಬಗ್ಗೆ ಹೀಗೆಂದರು.

ಗ್ರಾಸಕ್ಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು ।
ದಾಸನೆಂದು ತುಳಸಿ ಮಾಲೆಗಳ ಧರಿಸಿ ।
ಬೇಸರಿಲ್ಲದೆ ಅವರ ಕಾಡಿಬೇಡಿ ಬಳಸುತ ।
ಕಾಸುಗಳಿಸುವ ಪುರುಷ ಹರಿದಾಸನೆ ? ।

ಹೊಟ್ಟೆಗಾಗಿ ಜನರು ಬಗೆಬಗೆಯ ವೃತ್ತಿಗಳನ್ನು ಕೈಕೊಳ್ಳು ತ್ತಾರೆ. ಅವುಗಳಲ್ಲಿ ಒಳ್ಳೆಯವು ಸೇರಿರುವಂತೆ ಕೆಟ್ಟವು ಸೇರಿರು ತ್ತವೆ.

"ಎಲ್ಲರೂ ಮಾಡುವುದು ಹೊಟ್ಟೆಗಾಗಿ ।
ಗೇಣು ಬಟ್ಟೆಗಾಗಿ" ।
ಒಕ್ಕಲಿಗನು,
"ಕುಂಟೆ ಕೂರಿಗೆಯಿಂದ ಹೆಂಟೆ ಮಣ್ಣು ಹದಮಾಡಿ ।
ರಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ–
ಗೇಣು ಬಟ್ಟೆಗಾಗಿ" ।

ಆದರೂ ಅವನ ಜೀವನದ ಹೋರಾಟ ನ್ಯಾಯಸಮ್ಮತ ವಾದುದರಿಂದ ಯಾರೂ ಅವನನ್ನು ಕೀಳುದೃಷ್ಟಿಯಿಂದ ನೋಡು ವುದಿಲ್ಲ.; ಆದರೆ ಅಯೋಗ್ಯನು,

"ಕೆಟ್ಟತನದಿಂದ ಕಳ್ಳತನವನ್ನೆ ಮಾಡಿ
ಕಟ್ಟಿ ಹೊಡಿಸಿಕೊಂಬುವುದು ಹೊಟ್ಟೆಗಾಗಿ
ಗೇಣು ಬಟ್ಟೆಗಾಗಿ" ।

ಅವನನ್ನು ಯಾರೂ ಗೌರವ ದೃಷ್ಟಿಯಿಂದ ನೋಡುವ ಲ್ಲಿ. ನಾಲ್ಕು ವೇದ, ಪುರಾಣ, ಶಾಸ್ತ್ರ, ಪಂಚಾಂಗ ಹೇಳಿ ಕೊಂಡು ಹೊತ್ತು ಕಳೆವುದೇ ಆಗಲಿ; ಸನ್ಯಾಸಿ, ಜಂಗಮ, ಯೋಗಿ, ಜಟ್ಟಿ, ಮೊಂಡಬೈರಾಗಿ ನಾನಾವೇಷ ಕೊಂಬುದಾಗಲಿ ಹೊಟ್ಟೆಗಾಗಿ–ಗೇಣು ಬಟ್ಟೆಗಾಗಿ ಆದರೂ ಇವರು ಸ್ವಾರ್ಥಿ ಗಳಾದ ಕಾರಣ ಜನರ ಉಪೇಕ್ಷೆಗೆ ಗುರಿಯಾಗುತ್ತಾರೆ.

ಒಳಗಡೆ ಲವಲೇಷ ಭಕ್ತಿಯಿರದ ಕೆಲ ವಂಚಕರು ಪರಮ ಭಕ್ತರಂತೆ ನಟಿಸುತ್ತಾರೆ. ಹಾಗೆ ನಟಿಸಿ ಮುಗ್ಧ ಜನರನ್ನು ಸುಲಭವಾಗಿ ಮೋಸಗೊಳಿಸುತ್ತಾರೆ. ಈ ನಕಲಿ ಜನರ ಭಕ್ತಿಯು ಅಸಲಿ ಭಕ್ತರನ್ನು ನಾಚುವಂತೆ ಮಾಡುವಷ್ಟು ಆಡಂಬರದ್ದಾಗಿರು ತ್ತದೆ. ಇಂಥವರು,

"ಉದಯಕಾಲದೊಳೆದ್ದು ಗದಗದನಡಗುತ ।
ನದಿಯಲಿ ಮಿಂದೆನೆಂದು ಹಿಗ್ಗುತ ।
ಮದಮತ್ಸರ ಕ್ರೋಧ ಒಳಗೆ ತುಂಬಿಟ್ಟು ಕೊಂಡು ।"

ನದಿಯಲ್ಲಿದ್ದವರಿಗೆ ಆಶ್ಚರ್ಯ ತೋರುತ್ತಾರೆ. ಅಲ್ಲದೆ,

"ಕಂಚುಗಾರನ ಬಿಡಾರದಂದದಿ ।
ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ ।
ಮಿಂಚಬೇಕೆಂದು ಜ್ಯೋತಿಗಳನ್ನು ಹಚ್ಚಿ ।"

ವಂಚನೆಯಿಂದಲಿ ಪೂಜೆ ಮಾಡುತ್ತಾರೆ; ಇದಲ್ಲದೆ,

"ಕರದಲಿ ಜಪಮಣಿ ಬಾಯಲಿ ಮಂತ್ರವು ।
ಅರಿವೆ ಮುಸುಕು ಮೋರೆಗೆ ಹಾಕಿ
ಪರಸತಿಯರ ಗುಣ ಮನದಲಿ ಸ್ಮರಿಸುತ ।"

ಪರಮ ವೈರಾಗ್ಯಶಾಲಿಯೆಂದೆನಿಸಿಕೊಳ್ಳುತ್ತಾರೆ. ಇದೆಲ್ಲ ಊಟದ ಮಾರ್ಗಕ್ಕಾಗಿ ನಾಟಕದ ಸ್ತ್ರೀಯಂತೆ ಬಯಲು ಡಂಬವ ತೋರುವುದಾಗಿದೆ. ಹೀಗೆ ಪುರಂದರದಾಸರು ಉದರ–ವೈರಾಗಿಗಳ ನೀಚತನವನ್ನು ಬಯಲು ಮಾಡಿದರು. ಇಂಥಾದ್ದೆ ಕೆಲಸಕ್ಕೆ ಕೈಹಾಕಿದ ನರಹರಿತೀರ್ಥರು,

"ಮಾತಿನಲಿ ಹರಿದಾಸತನ, ನೀತಿಯಲಿ ಪ್ರಭುದಾಸತನ ।
ಶ್ರೀಕಾಂತನ ಸೇವೆಗೆ ಅನುಮಾನ, ಭೂಕಾಂತನ ಸೇವೆಗೆ ಸುಮ್ಮಾನ
ಧರ್ಮಕ್ಕೆ ಒಂದು ಕಾಸು ಸಾವಿರ ಹೊನ್ನು, ಅಧರ್ಮಕ್ಕೆ
ಕೋಟಿ ಹೊನ್ನು ಒಂದು ಕಾಸು ।

ಸತಿಯು ಬೈದರೆ ನಾ ಬೈವೆ, ಶ್ರೀಪತಿಯು ಬೈದರೆ ನಗುತ ಕೇಳುವೆ, ಎಂದು ನುಡಿದರು.

## ೧೮. ಎಲ್ಲರೂ ನಮ್ಮವರೇ

ದಾಸರು ಸಮಾಜದ ಒಂದು ನಿರ್ದಿಷ್ಟ ಗುಂಪಿಗೆ ತಾವು ಸೇರಿದವರೆಂದು ಬಗೆಯಲಿಲ್ಲ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯನ್ನು ತನ್ನವನೆಂದೇ ಭಾವಿಸಿದರು. ಈ ಬಗೆಯ ವಿಶ್ವಬಂಧುತ್ವ ದೊಡ್ಡವರಲ್ಲಿ ಮಾತ್ರ ಸಿಗುತ್ತಿದೆ. ದಾಸರು ಸರ್ವರ ಹಿತೈಷಿಗಳು. ಅವರು ಜಾತಿ, ಮತ, ಪಂಥಗಳ ಆಚೆ ನಿಂತ ಮಹಾ

ತ್ತರು. ಜನರಲ್ಲಿ ತಪ್ಪು ಕಂಡಲ್ಲಿ, ಅವರು ಉದ್ಧಾರಗೊಳ್ಳಲಿ ಎಂಬ ಉದ್ದೇಶದಿಂದ, ಅವರನ್ನು ತನ್ನವರು, ಪರಕೀಯರು ಎನ್ನದೆ ಖಂಡಿಸಿದರು. ಆ ಖಂಡನೆಯಲ್ಲೂ ಆತ್ಮೀಯತೆ ಹಾಗು ಕಳಕಳಿ ಎದ್ದು ಕಾಣುತ್ತದೆ. ಕನಕದಾಸರ ಕೆಳಗಿನ ಕೀರ್ತನೆಯಿಂದ ಈ ಮಾತು ಮನದಟ್ಟಾಗುತ್ತದೆ.

ತೀರ್ಥ ಪಿಡಿದವರು ತಿರುನಾಮಧಾರಿಗಳೆ–ಜನ್ಮ ।
ಸಾರ್ಥಕವಿರದವರು ಭಾಗವತರಹುದೆ ?
ಪಟ್ಟೆನಾಮವನಿಟ್ಟು ಪಾತ್ರೆ ಕೈಯಲ್ಲಿ ಪಿಡಿದು ।
ಗುಟ್ಟಿನಲಿ ಜಪಿಸುವರು ಗುರುತರಿಯದೆ ।
ಕೆಟ್ಟ ಕೂಗನೆ ಕೂಗಿ ಹೊಟ್ಟೆಯನು ಹೊರುವಂಥ
ಪೊಟ್ಟ ಗುಡುಮಗಳೆಲ್ಲ ಪರಮ ವೈಷ್ಣವರೆ ? ॥ ೧ ॥

ಮೂಗು ಹಿಡಿಯುತೆ ನೀರೊಳಗೆ ಮುಳುಗಿ ಜಪಮಾಡಿ
ಭಾಗವತ ಶಾಸ್ತ್ರಗಳನೆ ಓದಿ ।
ಬಾಗಿ ಪರಸತಿಯರನ್ನು ಬಯಸಿ ಕಣ್ಣಿಡುವಂಥ ।
ಯೋಗ ತಪ್ಪಿದವರೆಲ್ಲ ದೇವಬ್ರಾಹ್ಮಣರೆ ? ॥ ೨ ॥

ಅಲ್ಲಾ ಖುದಾಯೆಂಬ ಅರ್ಥವನು ಅರಿಯದೆ ।
ಮುಲ್ಲಾ ಶಾಸ್ತ್ರದ ನೆಲೆಯ ಮುನ್ನರಿಯದೆ ।
ಕಳ್ಳ ಕೂಗನೆ ಕೂಗಿ ಬೊಗಳಿ ಬಾಯ್ದೆರೆವಂಥ ।
ಕಳ್ಳರಿಗೆ ತಾ ಪೀರಸ್ವರ್ಗ ದೊರಕುವುದೆ ? ॥ ೩ ॥

ಲಿಂಗಾಂಗದೊಳಗಿರುವ ಅನುಭವವ ತಿಳಿಯದೆ ।
ಅಂಗ ಲಿಂಗದ ನೆಲೆಯು ಗುರುತರಿಯದೆ ।
ಜಂಗಮ ಸ್ಥಾವರದ ಹೊಲಬನರಿಯದ ಇಂಥ ।
ಭಂಗಿ ಮಕ್ಕಳೆಲ್ಲ ಲಿಂಗವಂತರಹುದೆ ॥ ೪ ॥

ಹೀಗೆ ಹಗರಣ ಮಾಡುತ್ತಿರುವ ಜನರನ್ನು ಕಂಡ ಪುರಂದರ ದಾಸರು ತಮಗೆ ನಗೆಯು ಬರುತಿದೆ ಎಂದರು.

ಹೊಟ್ಟೆಯ ಪೀಡೆ, ಆಸೆ ಆಮಿಷಗಳ ಉಪದ್ರವ ಹಾಗು ನೀಚರ ಮೋಸ ಇವುಗಳಿಂದ ಪಾರಾಗಬಲ್ಲ ಮನುಷ್ಯ ನೆಮ್ಮದಿ ಯಿಂದ ಇರಬಲ್ಲನೆಂದು ಬಗೆದ ದಾಸರು ನೀಚರನ್ನೂ ನೀಚತನ ವನ್ನೂ ಬಯಲಿಗೆಳೆದರು.

## ೧೯. ದಾಸರು ಬೋಧಿಸಿದ ತಾರಕ ಮಂತ್ರ

ದುರ್ಜನರನ್ನು ತೋರಿಸಿಕೊಟ್ಟು ಅವರಿಂದ ರಕ್ಷಿಸಿಕೊಳ್ಳ ಬೇಕು ಎಂದು ಹೇಳಿದ ದಾಸರು, ಜನರಿಗೆ ಪಲಾಯನವಾದವನ್ನು ಬೋಧಿಸದೆ, ಸಂಸಾರವನ್ನು ತ್ಯಾಜ್ಯವೆಂದು ಕರೆಯದೆ ಈಸಬೇಕು ಇದ್ದು ಜಯಿಸಬೇಕು ಎಂದು ಬೋಧಿಸಿದರು. ಈಸಬೇಕೆಂದ ನ್ನಷ್ಟೇ ಹೇಳದೆ ಹೇಗೆ ಈಸಬೇಕೆಂಬುದನ್ನೂ ಹೇಳಿದರು.

ಗೇರು ಹಣ್ಣಿನಲಿ ಬೀಜ ।
ಸೇರಿದಂತೆ ಸಂಸಾರದಿ ।
ಮೀರಿಯಾಸೆ ಮಾಡದಲೆ ।
ಧೀರಕೃಷ್ಣ ಭಕುತರೆಲ್ಲಾ
ಮಾಂಸದಾಸೆಗೆ ಮತ್ಸ್ಯ ಸಿಲುಕಿ ।
ಹಿಂಸೆಪಟ್ಟ ಪರಿಯುಂತೆ ।
ಮೋಸ ಹೋಗದ್ವಾಗೆ ಜಗ
ದೀಶ ಪುರಂದರ ವಿಠಲನ ನೆನೆದು ॥

ಈ ಹೇಸಿಗೆ ಸಂಸಾರದಲ್ಲಿ ಆಸೆ ಲೇಸು ಇಡದಹಾಗೆ ಈಸ ಬೇಕು ಇದ್ದು ಜಯಿಸಬೇಕು ಎಂದು ಬೋಧಿಸಿದರು.

ಹೀಗೆ ಈಜಬಲ್ಲ ವ್ಯಕ್ತಿ ದುಷ್ಟಶಕ್ತಿಗಳ ದಾಳಿಯಿಂದ ತನ್ನನ್ನು ಕಾಪಾಡಿಕೊಳ್ಳಲು ಸತತ ಸ್ಮರಣೆಯನ್ನು ಆಶ್ರಯಿಸುವುದು ಅತ್ಯಾವಶ್ಯಕ. ಈ ಬಗೆಯ ಸ್ಮರಣೆ ಮನುಷ್ಯನ ಆತ್ಮವನ್ನು ಪವಿತ್ರಗೊಳಿಸಲು ಹಾಗು ಆಸಕ್ತಿ, ಅನುರಾಗ, ಮೋಹ ಮುಂತಾದ ದುಷ್ಟಶಕ್ತಿಗಳ ಅನಿಷ್ಟ ಪರಿಣಾಮಗಳಿಂದ ಕಾಪಾಡಲು ಸುಭದ್ರವಾದ ಕೋಟೆಯಾಗಿದೆ: ಆಸೆ, ಆಮಿಷ, ಭ್ರಾಂತಿಗಳೆಂಬ ಕಲ್ಲುಗಳನ್ನು ಎಡವಿದರೂ ಬೀಳದಂತೆ ತಡೆಯುವ ಗಟ್ಟಿಮುಟ್ಟಾದ ಊರುಗೋಲಾಗಿದೆ; ಅಲ್ಲದೆ ಅವನ ಭಕ್ತಿಯನ್ನು ದೇವರ ಕೃಪೆಯೊಡನೆ ಕಟ್ಟುವ ಬಲವಾದ ಹಗ್ಗವಾಗಿದೆ. ಇದನ್ನು ಸಾಧಿಸಿದ ವ್ಯಕ್ತಿ ಇಹವನ್ನು ಸುಲಭವಾಗಿ ಗೆಲ್ಲುವಂತೆ ಪರವನ್ನು ಸೇರಲೂ ಅರ್ಹನಾಗುತ್ತಾನೆ. ಸತತ ಸ್ಮರಣೆಯಿಂದ ಇಹವನ್ನು ಗೆಲ್ಲುವುದು ಕಂಬಳಿಹೊದ್ದು ಜೇನು ಬಿಡಿಸಿದಷ್ಟು ಸುರಕ್ಷಿತ. ಆದ್ದರಿಂದ ಪುರಂದರ ದಾಸರು.

ನರಜನ್ಮ ಬಂದಾಗ; ನಾಲಿಗೆ ಇರುವಾಗ ಕೃಷ್ಣ ಎನಬಾರದೆ।
ಕೃಷ್ಣ ಎಂದರೆ ಕಷ್ಟವು ಪರಿಹಾರ, ಕೃಷ್ಣ ಎನಬಾರದೆ ।
ಮಲಗಿದ್ದು ಮೈಮುರಿದೇಳುತಲೊಮ್ಮೆ
ಶ್ರೀ ಕೃಷ್ಣ ಎನಬಾರದೆ ।
ಸುಳಿದಾಡುವ ಮನೆಯೊಳಗಾದರು ಒಮ್ಮೆ
ಕೃಷ್ಣ ಎನಬಾರದೆ ।
ಸ್ನಾನಪಾನ ಜಪತಪಗಳ ಮಾಡುತ ಕೃಷ್ಣ ಎನಬಾರದೆ ।
ಶಾಲ್ಯಾನ್ನ ಷಡುರಸ ತಿಂದು ತೃಪ್ತನಾಗಿ ಕೃಷ್ಣ ಎನಬಾರದೆ ।
ಗಂಧವಪೂಸಿ ತಾಂಬೂಲವ ಮೆಲುವಾಗ ಕೃಷ್ಣ ಎನಬಾರದೆ।
ಚೆಂದುಳ್ಳ ಹಾಸಿಗೆಯೊಳು ಕುಳಿತೊಮ್ಮೆ ಕೃಷ್ಣ ಎನಬಾರದೆ।
ಕಂದನ್ನ ಬಿಗಿಬಿಗಿದಪ್ಪಿ ಮುದ್ದಾಡುತ ಕೃಷ್ಣ ಎನಬಾರದೆ ।
ಮಂದಗಾಮಿನಿಯೊಳು ಸರಸವಾಡುತಲೊಮ್ಮೆ
ಕೃಷ್ಣ ಎನಬಾರದೆ
ದಾರಿನಡೆವಾಗ ಭಾರವಹೊರುವಾಗ ಕೃಷ್ಣ ಎನಬಾರದೆ
ಪರಿಹಾಸ್ಯದ ಮಾತನಾಡುತಲೊಮ್ಮೆ
ಶ್ರೀ ಕೃಷ್ಣ ಎನಬಾರದೆ
ಪರಿಪರಿ ಕೆಲಸದೊಳೊಂದು ಕೆಲಸವೆಂದು
ಕೃಷ್ಣ ಎನಬಾರದೆ
ದುರಿತ ರಾಸಿಗಳನು ತರಿದು ಬಿಸಾಡುವ ಕೃಷ್ಣ ಎನಬಾರದೆ
ಗರುಡಗಮನ ನಮ್ಮ ಪುರಂದರ ವಿಠಲನ ಕೃಷ್ಣ ಎನಬಾರದೆ

ಎಂದು ಜನರನ್ನು ಕೇಳಿದರು.

ದಾಸರು ಪ್ರಾಪಂಚಿಕ ಸುಖಗಳನ್ನು ಅನುಭವಿಸಬಾರದು ಎಂದು ಹೇಳಲಿಲ್ಲ, ಆದರೆ ಬಂಧನಕಾರಿಯಾಗಬಹುದಾದ ಆ

ಸುಖಗಳನ್ನು ದೇವರನಾಮಸ್ಮರಣೆಯಿಂದ ನಿರುಪದ್ರವಿಗಳನ್ನಾಗಿ ಮಾಡಿಕೊಳ್ಳಲು ಹೇಳಿದರು. ಸ್ಮರಣೆಯಿರದೆ ಹೋದಲ್ಲಿ ಒಳ್ಳೆಯ ಕೆಲಸಗಳೂ ಮೋಹ ಆಸಕ್ತಿಗಳಿಂದಾಗಿ ಮಾನವನ ಹೃದಯದ ಮೇಲೆ ಸಂಸ್ಕಾರಗಳನ್ನುಂಟುಮಾಡಿ ಬಂಧನಕಾರಿಯಾಗುತ್ತವೆ. ಸ್ಮರಣೆಯಿಂದ ಮೋಹ ಆಸಕ್ತಿಗಳ ಸ್ಥಾನವನ್ನು ಕರ್ತವ್ಯ ಆಕ್ರಮಿಸುವುದರಿಂದ ಮಾಡುವ ಕೆಲಸಗಳು ಬಂಧನ ಕಾರಿಯಾಗುವುದಿಲ್ಲ. ದಾಸರು ವಿಸ್ಮರಣೆಯೂ ಬಂಧನ ಸ್ಮರಣೆಯೇ ಮುಕ್ತಿಯೆಂಬುದನ್ನು ತಿಳಿಹೇಳಿದರು. ಸ್ಮರಣೆ ಯಿಂದ ಸಂಸಾರವು ಬಂಧನಕಾರಿ ಆಗದಿದ್ದಾಗ್ಗೆ ಅದನ್ನು ಬಿಟ್ಟು ಓಡುವ ಪ್ರಶ್ನೆಯೇ ಏಳುವುದಿಲ್ಲ. ಅದು ಪರಮಾತ್ಮನ ಪ್ರಾಪ್ತಿ ಗಾಗಿ ಉತ್ತಮ ಕಾರ್ಯಕ್ಷೇತ್ರವಾಗುತ್ತದೆ. ಹೀಗೆ ಪ್ರತಿಯೊಬ್ಬ ವ್ಯಕ್ತಿ ನಡೆದುಕೊಂಡರೆ ಸಮಾಜದಲ್ಲಿ ಬಾಂಧವ್ಯ, ಪ್ರೀತಿ, ಆತ್ಮೀ ಯತೆ ಮುಂತಾದವು ಬೆಳೆದು ಶಾಂತಿ ಹಾಗು ಸುವ್ಯವಸ್ಥೆ ತಾವಾಗಿ ನೆಲೆಗೊಳ್ಳುತ್ತವೆ.

ಸತತ ಸ್ಮರಣೆಯ ಜೊತೆಗೆ ಮಾಡುವುದೆಲ್ಲ ದೇವರಿಗಾಗಿ ಅಥವಾ ದೇವರ ಸೇವೆಯೆಂದು ಬಗೆಯುವುದು ಅತ್ಯಂತ ಪ್ರಯೋಜನಕಾರಿಯಾದದ್ದು. ಸತತಸ್ಮರಣೆ ಕಬ್ಬು ಆದರೆ ದು ಧ್ಯಾನ ಅವರ ಮೇಲೆ ಇಟ್ಟ ಜೇನಿನಂತೆ. ದೇವರ ಸಂಪರ್ಕ ವನ್ನು ಸ್ಮರಣೆಯಿಂದ ಒಂದು ಕ್ಷಣವೂ ಕಳೆದುಕೊಳ್ಳದೆ ಮಾಡುವ ಕೆಲಸಗಳು ಆತನಿಗಾಗಿ, ಆತನ ಸೇವೆ ಅಥವಾ ಆತನಿಗೆ ಅರ್ಪಿತ ವೆಂದು ತಿಳಿದು ಮಾಡಿದ್ದಾದರೆ ಇಹವು ಬಂಧನಕಾರಿಯೂ ತ್ಯಾಜ್ಯವೂ ಆಗದೆ ಪರಕ್ಕೆ ಸೋಪಾನವಾಗುತ್ತದೆ. ದಾಸರು ಇಹವನ್ನು

ಕೆಳಗಿಳಿಸದೆ ಅದು ಪರಕ್ಕೆ ಸೋಪಾನವಾಗಬಲ್ಲುದೆಂದು ಹೇಳಿ ಅದರ ಸ್ಥಾನವನ್ನು ಎತ್ತರಿಸಿದರು. ದಾಸರ ಈ ಮಾತುಗಳಂತೆ ನಡೆಯುವ ವ್ಯಕ್ತಿ ತೀವ್ರಗತಿಯಲ್ಲಿ ಭೌತಿಕತೆಯಿಂದ ಆಧ್ಯಾತ್ಮ ದೆಡೆಗೆ, ಪ್ರಾಪಂಚಿಕತೆಯಿಂದ ಪಾರಮಾರ್ಥದೆಡೆಗೆ, ಜಡತೆಯಿಂದ ಸೂಕ್ಷ್ಮತೆಯೆಡೆಗೆ ಹಾಗು ಅಲ್ಪತೆಯಿಂದ ಮಹತ್ತಿನೆಡೆಗೆ ಸಾಗ ಬಲ್ಲ. ಅದಕ್ಕಾಗಿಯೇ ಪುರಂದರದಾಸರು "ಸಕಲವೆಲ್ಲವೂ ಹರಿ ಸೇವೆಯೆನ್ನಿ" ಎಂದು ಬೋಧಿಸಿದ್ದು. ಈ ಬೋಧನೆಯುಳ್ಳ ಹಾಡನ್ನು ಕೆಳಗೆ ಕೊಡಲಾಗಿದೆ.

ಸಕಲವೆಲ್ಲವು ಹರಿಸೇವೆಯೆನ್ನಿ ।
ರುಕುಮಿಣಿಯ ಪತಿಯಲ್ಲದನ್ಯವಿಲ್ಲವೆನ್ನಿ ।
ನುಡಿವುದೆಲ್ಲವು ನಾರಾಯಣನ ಕೀರ್ತಿಯೆನ್ನಿ ।
ನಡೆವುದೆಲ್ಲವು ದೇವರಯಾತ್ರೆಯನ್ನಿ ।
ಕೊಡುವ ದಾನವು ಕಾಮಜಗರ್ಪಿತವೆನ್ನಿ ।
ಎಡೆಯ ಅನ್ನವು ಹರಿಯ ಪ್ರಸಾದವೆನ್ನಿ ।
ಹೊಸವಸ್ತ್ರ ಉಡುವಲ್ಲಿ ಹರಿಯಬೆಳ್ಳುಡೆಯೆನ್ನಿ ।
ಕುಸುಮ ಪರಿಮಳವು ಶ್ರೀಕೃಷ್ಣಗೆನ್ನಿ ।
ಎಸೆವ ಆಭರಣಗಳು ಯಶೋದೆನಂದನಿಗೆನ್ನಿ ।
ಶಶಿಮುಖಿಯರೊಡನಾಟ ಸೊಬಗ ಗೋವಳಗೆನ್ನಿ ।
ಆಟಪಾಟಗಳು ಅಂತರ್ಯಾಮಿಗೆನ್ನಿ ।
ಕೂಟ ನೋಟಗಳೆಲ್ಲ ಕಂಜನಾಭಗೆನ್ನಿ ।
ನೀಟಾದ ವಸ್ತುಗಳು ಕೈಟಭಾಂತಕಗೆನ್ನಿ ।
ಕೋಟಲೆ ಸಂಸಾರ ನಾಟಕಧರಗೆಯೆನ್ನಿ ।

ನಿದ್ರೆಜಾಗರವು ಸಮುದ್ರ ಶಯನಗೆನ್ನಿ ।
ಭದ್ರನಿಧಿ ಗಜರಾಜವಂದಗೆನ್ನಿ ।
ರೌದ್ರದಾರಿದ್ರ್ಯವು ರಾಘವನಡಿಗೆನ್ನಿ ।

ಇಂಥ ಅಮೂಲ್ಯ ಮಾತುಗಳನ್ನು ಹೇಳಿ ದಾಸರು ಜನರ ಉದ್ಧಾರಮಾಡುವ ಮಹತ್ಕಾರ್ಯವನ್ನು ಕೈಕೊಂಡರು.

## ೨೦ ಉಪಸಂಹಾರ

ದಾಸರು ತಾವು ಅಮೂಲ್ಯವಾದ ಯಾವ ವಸ್ತುವನ್ನು ಪಡೆದರೊ ಅದನ್ನು ಎಲ್ಲರೂ ಪಡೆಯಲಿ ಎಂದು ಹಾರೈಸಿದರು. ಅವರ ಜೀವನದ ಗುರಿಯು ಆತ್ಮಸಾಕ್ಷಾತ್ಕಾರವಾಗಿದ್ದಂತೆ ಅವರ ಸಾಹಿತ್ಯದ ಗುರಿಯೂ ಸಮಾಜದ ಅರ್ಹ ವ್ಯಕ್ತಿಗಳ ಆತ್ಮ ಸಾಕ್ಷಾತ್ಕಾರವೇ ಆಗಿದ್ದಿತು. ಇದನ್ನು ಸಾಧಿಸಲು ಧರ್ಮ ಹಾಗು ಭಕ್ತಿ ಅವಶ್ಯಕವೆಂದು ಭಾವಿಸಿದರು. ಸಂಸಾರವನ್ನು ಆತಂಕಕಾರಿ ಯೆಂದು ಭಾವಿಸಲಿಲ್ಲ. ಆದ್ದರಿಂದ ಸಂಸಾರದಲ್ಲಿ ಇದ್ದುಕೊಂಡೇ ವ್ಯಕ್ತಿಮುಕ್ತಿಯನ್ನು ಪಡೆಯಲಿ ಎಂದು ಬಯಸಿದರು. ಆದಕಾರಣ ಸಂಸಾರ ಹಾಗು ಸಮಾಜ ಇವುಗಳನ್ನು ಶುಚಿಗೊಳಿಸಲು ಯತ್ನಿಸಿ ದರು. ವ್ಯಕ್ತಿಯನ್ನು ತಿದ್ದದೆ ಸಮಾಜವನ್ನು ತಿದ್ದುವುದು ಕಷ್ಟ ಸಾಧ್ಯವೆಂದು ಬಗೆದು ತಮ್ಮ ಪ್ರಯತ್ನವನ್ನು ವ್ಯಕ್ತಿಯ ತಿದ್ದುವ ಕಡೆ ಹೊರಳಿಸಿದರು. ವ್ಯಕ್ತಿಯಲ್ಲಿರುವ ಮೂಢನಂಬಿಕೆ, ತಪ್ಪು

ಗ್ರಹಿಕೆ, ಇವುಗಳನ್ನು ದೂರಮಾಡಿ, ನೇಮ ನಿಷ್ಠೆ, ಸಂಪ್ರದಾ
ಪದ್ಧತಿ ಹಾಗು ಆಚಾರ ವಿಚಾರಗಳ ಸರಿಯಾದ ಅರ್ಥ
ಅವನಲ್ಲಿ ಭಕ್ತಿ ಹಾಗು ಧರ್ಮಶ್ರದ್ಧೆಯನ್ನು ತುಂಬಿದರು.
ರಿಂದ ಸಮಾಜದಲ್ಲಿ ಭಕ್ತಿ ಹಾಗು ಧರ್ಮದ ವಾತಾವ
ಉಂಟಾಗಲು ಸಾಧ್ಯವಾಯಿತು.

ಇವರ ಈ ಪ್ರಯತ್ನದ ಫಲವಾಗಿ ಜನರಲ್ಲಿ ನೈ
ಹೆಚ್ಚಲು, ಭಾತಿಕತೆಯ ವ್ಯಾಮೋಹ ತಗ್ಗಲು, ಸಂಪ
ದುರ್ಮೋಹ ಕಡಿಮೆಯಾಗಲು ಹಾಗು ಭೇದಭಾವ ತಿಳಿಯ
ಬಹುಮಟ್ಟಿಗೆ ಸಾಧ್ಯವಾಯಿತು. ಜನರಲ್ಲಿ ವಿಶಾಲಮನೋಭ
ಬೆಳೆದುದರಿಂದ ಅವರು ಹೆಚ್ಚು ಕ್ಷಮಾಶೀಲರಾದರು. ಕಲಹ
ಕಡಿಮೆಯಾದವು; ಬಾಹ್ಯವಸ್ತುಗಳ ಅವಲಂಬನೆಯಿಲ್ಲದೆ ಜ
ಸಂತೃಪ್ತರಾಗಲು ಸಮರ್ಥರಾದ ಕಾರಣ ಅವರಿಗೆ ಬಡ
ಶಾಪವೆನಿಸಲಿಲ್ಲ. ಈ ಬಗೆಯ ಸಂತೃಪ್ತಿಯಿದ್ದ ಜ
ಗಳಿಸುವ ಗೋಜಿಗೆ ಹೋಗದಿರುವುದರಿಂದ ರಾಷ್ಟ್ರದ ತ
ವರಮಾನ ತಗ್ಗುವುದು ಎಂದು ಆಕ್ಷೇಪಿಸುವವರಿಗೆ ಕೊಡ
ಉತ್ತರವಿಷ್ಟೆ: ದಾಸರು ಎಂದೂ ಸಂಪಾದನೆಯನ್ನು ವಿರೋ
ಲಿಲ್ಲ; ಸಂಪತ್ತನ್ನೂ ದ್ವೇಷಿಸಲಿಲ್ಲ. ಆದರೆ ಅವುಗಳ ಮೇ
ಅನುಚಿತ ವ್ಯಾಮೋಹವನ್ನು ಮಾತ್ರ ವಿರೋಧಿಸಿದರು ವ
ದ್ವೇಷಿಸಿದರು. ಇದರಿಂದ ಹಣ ಎಲ್ಲರಲ್ಲೂ ಹರಿದು ಹ
ಹೋಗಲು ಸಾಧ್ಯವಾಯಿತು; ಬಡವಬಲ್ಲಿದರ ಅಂತರ ಆ
ವಾಗಿ ಅಲ್ಲದೆ ಸಾಮಾಜಿಕವಾಗಿಯೂ ಕಡಿಮೆಯಾಯಿ

## ಉಪನ್ಯಾಸ ಗ್ರಂಥ ಮಾಲೆಯ
## ಇತ್ತೀಚಿನ ಪ್ರಕಟನೆಗಳು

---

೧. ಶರಣ ಸಾಹಿತ್ಯ —ಬಸವಣ್ಣೆಪ್ಪ ಸೋ. ಗೊರವರ

೨. ಉಷ್ಣ ಮತ್ತು ಅದರ ಸ್ವರೂಪ —ಬಿ. ಕೆ. ಚಳಗೇರಿ

೩. ಸಾಂಸರ್ಗಿಕ ರೋಗಗಳು ಮತ್ತು ಅವುಗಳನ್ನು ತಡೆಗಟ್ಟುವ ಕ್ರಮಗಳು —ಪಿ. ಎಸ್. ಬಣಕಾರ

೪. ಪ್ರಾಚೀನ ಭಾರತದಲ್ಲಿಯ ವಿದ್ಯಾಕೇಂದ್ರಗಳು —ಅನಂತ ಕುಲಕರ್ಣಿ

೫. ಗಾದೆಗಳಲ್ಲಿ ಆರೋಗ್ಯ —ಪಿ. ಎಸ್. ಶಂಕರ

೬. ಚಟಗಳು, ರೂಢಿಗಳು ಮತ್ತು ಕ್ಯಾನ್ಸರ —ಸ. ಜ. ನಾಗಲೋಟಿಮಠ

೭. ಸಿಡುಬುರೋಗ —ಡಾ. ಬಿ. ಟಿ. ತುಕೋಳ

೮. ರಂಗಭೂಮಿಯ ನಟಸಾರ್ವಭೌಮ ಸಿದ್ರಾಮಪ್ಪ ಹಂದಿಗನೂರ —ಡಾ. ಬಿ. ಆರ್. ನಾಡಗೌಡ

೯. ಮೋಕ್ಷಗುಂಡಂ ವಿಶ್ವೇಶ್ವರಯ್ಯ —ಶಿವಕುಮಾರ ಪಾಟೀಲ

೧೦. ತ್ರಿವೇಣಿಯವರ ಕಾದಂಬರಿಗಳು —ವಿಜಯಶ್ರೀ ಸಬರದ

---

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ -೫೮೦ ೦೦೩